لفضيلة الشيخ محمد بن صالح العثيمين رحمه الله تعالى

ಫದೀಲತು ಶೈಖ್
ಮುಹಮ್ಮದ್ ಇಬ್ನ್ ಸಾಲಿಹ್ ಅಲ್‌ಉಸೈಮೀನ್
ರಹಿಮಹುಲ್ಲಾಹು ತಆಲಾ

عَقِيدَةُ أَهْلِ السُّنَّةِ وَالْجَمَاعَةِ

# ಅಹ್ಲು ಸ್ಸುನ್ನಃ ವಲ್‌ಜಮಾಅತ್ತಿನ ವಿಶ್ವಾಸ

ಅನುವಾದ ಹಾಗೂ ಟಿಪ್ಪಣಿಗಳು:
ಮುಹಮ್ಮದ್ ಹಂಝಾ ಪುತ್ತೂರು

ಪ್ರಕಾಶಕರು:
ಮನ್‌ಹಜ್ ಅಲ್‌ಅಂಬಿಯಾ ಕಾಲ್ & ಗೈಡೆನ್ಸ್ ಸೆಂಟರ್
ಕುವೈತ್

Title : Ahlu sSunnah Wal Jama'atthina Vishwasa
Author : Shaykh Muhammad Ibn Saalih Al Uthaimeen
Translation & Footnotes : Muhammad Hamza Puttur

Typesetting & DTP :

IMAGE PUBLICATIONS
imageputtur@hotmail.com

PUBLISHERS:

Manhaj-Al-Ambiya
Call & Guidance Centre
Kuwait
*email: al.ambiya@gmail.com*
*dawathu-salafiyya@hotmail.com*

SPONSORS:

جمعية إحياء التراث الإسلامي الكويت

**REVIVAL OF ISLAMIC HERITAGE SOCIETY**
**KUWAIT**

# كلمة الناشر

بسم الله الرحمن الرحيم

الحمد لله رب العالمين والصلاة والسلام على أشرف الأنبياء والمرسلين وعلى آله وصحبه أجمعين، أما بعد:

لا بد لكل بناء ماديا كان أو معنويا من أساس يقوم عليه، والدين الإسلامي بناء متكامل يشمل جميع حياة المسلم منذ ولادته وحتى مماته ثم ما يصير إليه بعد موته، وهذا البناء الضخم يقوم على أساس متين هو عقيدة أهل السنة والجماعة.

إن المصنفات والرسائل التي ألفها أئمة المسلمين ومشائخهم قديما وحديثا حول عقيدة أهل السنة والجماعة كثيرة غير منحصرة. وإن هذا العصر الذي يعيش المسلمون فيه مع معتقدات شتي وأهواء مختلفة، حيث يدعي كل واحد منهم أنه على عقيدة أهل السنة والجماعة، يحتاج إلى بيان العقيدة الصحيحة الصادرة من الكتاب والسنة حسب فهم سلف الأمة.

ولكن مع الأسف الشديد إن لغتنا الكنرية ناقصة من هذا الشيئ، لهذا أردنا أن نترجم كتابا عربيا نفيسا قيما موجزا يفيد ما يحتاجه كل مسلم في إيمانه بالله وملائكته وكتبه ورسله واليوم الآخر والقدر خيره وشره، فوجدنا هذا الكتاب المسمى بـ «عقيدة أهل السنة والجماعة» لسماحة الشيخ محمد بن صالح العثيمين رحمه الله يليق كل هذه الصفات مئة في المئة. فقمنا بترجمته وطبعه بعون الله سبحانه وتعالى.

ونسأل الله أن يجعله في ميزان الحسنات للمصنف والمترجم وأن ينفع بها المسلمين وأن يضاعف الأجر لكل من سعى في نشرها وإيصالها إلى من يستفيد منها إنه سبحانه جواد كريم .

وصلى الله تعالى على نبينا محمد وآله وصحبه وسلم

الناشرون

## ಒಳಪುಟಗಳಲ್ಲಿ....


| | | |
|---|---|---|
| 1. | ಶೈಖ್ ಇಬ್ನ್ ಬಾಝ್‌ರವರ ಮುನ್ನುಡಿ | 7 |
| 2. | ಗ್ರಂಥಕರ್ತರ ಮುನ್ನುಡಿ | 9 |
| 3. | ನಮ್ಮ ಅಕೀದಃ | 11 |
| 4. | ಅಲ್ಲಾಹನಲ್ಲಿರುವ ವಿಶ್ವಾಸ | 11 |
| 5. | ದೃಢೀಕರಣ ಮತ್ತು ನಿರಾಕರಣೆಯಲ್ಲಿ ಕುರ್‌ಆನ್, ಸುನ್ನತ್ ಮತ್ತು ಸಲಫು ಸ್ವಾಲಿಹ್‌ಗಳು ಚಲಿಸಿದ ಹಾದಿಯ ಅವಲಂಬನೆ | 31 |
| 6. | ಮಲಕ್‌ಗಳಲ್ಲಿರುವ ವಿಶ್ವಾಸ | 35 |
| 7. | ಗ್ರಂಥಗಳಲ್ಲಿರುವ ವಿಶ್ವಾಸ | 39 |
| 8. | ಸಂದೇಶವಾಹಕರುಗಳಲ್ಲಿರುವ ವಿಶ್ವಾಸ | 44 |
| 9. | ಅಂತ್ಯದಿನದಲ್ಲಿರುವ ವಿಶ್ವಾಸ | 54 |
| 10. | ವಿಧಿಯಲ್ಲಿರುವ –ಅದರ ಒಳಿತು ಕೆಡುಕುಗಳಲ್ಲಿರುವ– ವಿಶ್ವಾಸ | 63 |
| 11. | ವಿಶ್ವಾಸದ ಫಲಗಳು | 70 |

تقديم لسماحة الشيخ عبد العزيز بن عبد الله بن باز رحمه الله تعالى

## ಸಮಾಹತು ಶೈಖ್ ಇಬ್ನ್ ಬಾಝ್‌ರವರ ಮುನ್ನುಡಿ

بسم الله الرحمن الرحيم

الحمد لله وحده والصلاة والسلام على من لا نبي بعده وعلى آله وصحبه، أما بعد:

ನಮ್ಮ ಸಹೋದರನಾದ ಅಲ್ಲಾಮಾ ಫದೀಲತು ಶೈಖ್ ಮುಹಮ್ಮದ್ ಇಬ್ನ್ ಸಾಲಿಹ್ ಅಲ್‌ಉಸೈಮೀನ್ ರಚಿಸಿದ ಅಕೀದಃ (ವಿಶ್ವಾಸ)ದ ಕುರಿತಿರುವ ಈ ಸಂಕ್ಷಿಪ್ತವಾದ ಮತ್ತು ಅಮೂಲ್ಯವಾದ ಪ್ರಬಂಧವನ್ನು ನಾನು ಕಂಡುಕೊಂಡೆನು ಹಾಗೂ ಇದನ್ನು ಪೂರ್ಣವಾಗಿ ಆಲಿಸಿದೆನು. ಅಲ್ಲಾಹನ ಏಕತ್ವದಲ್ಲಿ, ಅವನ ನಾಮ ಮತ್ತು ವಿಶೇಷಣಗಳಲ್ಲಿ, ಹಾಗೂ ಮಲಕ್‌ಗಳು, ಗ್ರಂಥಗಳು, ಸಂದೇಶವಾಹಕರುಗಳು, ಅಂತ್ಯದಿನ ಮತ್ತು ಕದರ್(ಪೂರ್ವವಿಧಿ) –ಅದರ ಒಳಿತು ಮತ್ತು ಕೆಡುಕುಗಳು– ಮುಂತಾದ ವಿಶ್ವಾಸಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಅಹ್ಲು ಸ್ಸುನ್ನಃ ವಲ್‌ಜಮಾಅಃದ ಅಕೀದಃವನ್ನು ವಿವರಿಸುವುದರಲ್ಲಿ ಇದು ಸಮಗ್ರವಾಗಿದೆ ಎಂದು ನಾನು ಮನಗಂಡೆನು.

ಅವರು (ಗ್ರಂಥಕರ್ತರು) ಇದನ್ನು ಉತ್ತಮವಾಗಿ ರಚಿಸಿರುವರು ಮತ್ತು ಅನೇಕ ಮಾಹಿತಿಗಳನ್ನು ನೀಡಿರುವರು ಹಾಗೂ ಅಲ್ಲಾಹು, ಅವನ ಮಲಕ್‌ಗಳು, ಅವನ ಗ್ರಂಥಗಳು, ಅವನ ಸಂದೇಶವಾಹಕರು, ಅಂತ್ಯದಿನ ಮತ್ತು ಕದರ್ –ಅದರ ಒಳಿತು ಮತ್ತು ಕೆಡುಕುಗಳು– ಇತ್ಯಾದಿಗಳಲ್ಲಿ ವಿದ್ಯಾರ್ಥಿಗೆ ಮತ್ತು ಪ್ರತಿಯೊಬ್ಬ ಮುಸ್ಲಿಮನಿಗೆ ಇರುವ ವಿಶ್ವಾಸವು ಏನನ್ನು ಬೇಡುತ್ತದೋ ಅದನ್ನು ಅವರು ತಿಳಿಸಿಕೊಟ್ಟಿರುವರು. ಅಕೀದಃದ ಕುರಿತು ರಚಿಸಲಾದ ಅನೇಕ ಗ್ರಂಥಗಳಲ್ಲಿ ಹೆಚ್ಚಾಗಿ ಕಂಡುಬರದಂತಹ, ಅಕೀದಃದೊಂದಿಗೆ ಸಂಬಂಧ ಹೊಂದಿದ ಹಲವು ಮಾಹಿತಿಗಳನ್ನು ಅವರು ಇದರಲ್ಲಿ ಸೇರಿಸಿರುವರು. ಅಲ್ಲಾಹು ಅವರಿಗೆ ಉತ್ತಮ ಪ್ರತಿಫಲವನ್ನು ದಯಪಾಲಿಸಲಿ ಮತ್ತು ಅವರಿಗೆ ವಿದ್ಯೆ ಹಾಗೂ ಮಾರ್ಗದರ್ಶನವನ್ನು ಹೆಚ್ಚಿಸಿಕೊಡಲಿ. ಅವರ ಈ ಪ್ರಬಂಧದಿಂದ ಹಾಗೂ ಇನ್ನಿತರ ಕೃತಿಗಳಿಂದ ನಮಗೆ ಉಪಯೋಗವುಂಟಾಗುವಂತೆ ಮಾಡಲಿ. ನಮ್ಮನ್ನು, ಅವರನ್ನು ಮತ್ತು ನಮ್ಮೆಲ್ಲ ಸಹೋದರರನ್ನೂ ಮಾರ್ಗದರ್ಶನ ನೀಡುವವರಾಗಿಯೂ, ಮಾರ್ಗದರ್ಶನ ಪಡೆದವರಾಗಿಯೂ, ಸ್ಪಷ್ಟವಾದ ಪ್ರಮಾಣದ ಮೇಲೆ ಅಲ್ಲಾಹನತ್ತ ಆಹ್ವಾನಿಸುವವರಾಗಿಯೂ ಮಾಡಲಿ. ಖಂಡಿತವಾಗಿಯೂ ಅವನು ಎಲ್ಲವನ್ನೂ ಆಲಿಸುವವನೂ ಅತಿನಿಕಟನೂ ಆಗಿದ್ದಾನೆ.

ಇದನ್ನು ಬರೆಯಿಸಿದ ಅಲ್ಲಾಹನ ಆಶ್ರಯವನ್ನು ಅತಿಯಾಗಿ ಹಂಬಲಿಸುವ ಅಬ್ದುಲ್

ಅಝೀಝ್ ಇಬ್ನ್ ಅಬ್ದಿಲ್ಲಾಹ್ ಇಬ್ನ್ ಬಾಝ್ (ಅಲ್ಲಾಹನ ಅವರಿಗೆ ಪಾಪಮುಕ್ತಿ ದಯಪಾಲಿಸಲಿ) ಇದನ್ನು ಹೇಳಿದ್ದಾರೆ.

وصلى الله وسلم على نبينا محمد، وآله وصحبه

**ಅಬ್ದುಲ್ ಅಝೀಝ್ ಇಬ್ನ್ ಬಾಝ್**

**ಅಧ್ಯಕ್ಷರು**

**ಇದಾರತುಲ್ ಬುಹೂಸಿಲ್ ಇಲ್ಮಿಯ್ಯತಿ**
**ವಲ್‌ಇಫ್ತಾಇ ವದ್ದಅ್‌ವತಿ ವಲ್‌ಇರ್ಶಾದ್**
**(ಸೌದಿ ಅರೇಬಿಯಾ)**

# مقدمة المؤلف رحمه الله
# ಗ್ರಂಥಕರ್ತರ ಮುನ್ನುಡಿ

الْحَمْدُ لِلَّهِ رَبِّ الْعَالَمِينَ، وَالْعَاقِبَةُ لِلْمُتَّقِينَ، وَلَا عُدْوَانَ إِلَّا عَلَى الظَّالِمِينَ، وَأَشْهَدُ أَنْ لَا إِلَهَ إِلَّا اللَّهُ وَحْدَهُ لَا شَرِيكَ لَهُ، الْمَلِكُ الْحَقُّ الْمُبِينُ، وَأَشْهَدُ أَنَّ مُحَمَّدًا عَبْدُهُ وَرَسُولُهُ، خَاتَمَ النَّبِيِّينَ وَإِمَامَ الْمُتَّقِينَ، صَلَّى اللَّهُ عَلَيْهِ، وَعَلَى آلِهِ وَأَصْحَابِهِ، وَمَنْ تَبِعَهُمْ بِإِحْسَانٍ إِلَى يَوْمِ الدِّينِ، أَمَّا بَعْدُ:

ಖಂಡಿತವಾಗಿಯೂ ಅಲ್ಲಾಹು ಅವನ ಸಂದೇಶವಾಹಕರಾದ ಮುಹಮ್ಮದ್ (ﷺ)ರವರನ್ನು ಮಾರ್ಗದರ್ಶನದೊಂದಿಗೆ ಮತ್ತು ಸತ್ಯಧರ್ಮದೊಂದಿಗೆ, ಜಗತ್ತಿನಲ್ಲಿರುವವರೆಲ್ಲರಿಗೂ ಅನುಗ್ರಹವಾಗಿಯೂ, ಕರ್ಮವೆಸಗುವವರಿಗೆ ಅನುಸರಣಾಯೋಗ್ಯ ಮಾದರಿಯಾಗಿಯೂ ಮತ್ತು ಸಂಪೂರ್ಣ ಸೃಷ್ಟಿಗಳ ಮೇಲೆ ಒಂದು ಪುರಾವೆಯಾಗಿಯೂ ನಿಯೋಗಿಸಿದ್ದಾನೆ.

ಅಲ್ಲಾಹು ಅವರ ಮೂಲಕ ಮತ್ತು ಅವರ ಮೇಲೆ ಅವತೀರ್ಣಗೊಳಿಸಲಾದ ಗ್ರಂಥ ಹಾಗೂ ಹಿಕ್ಮತ್‌ನ ಮೂಲಕ ಸೃಷ್ಟಿಗಳಿಗೆ, ಅಪ್ಪಟವಾದ ವಿಶ್ವಾಸಗಳು, ನಿಖರವಾದ ಕರ್ಮಗಳು, ಶ್ರೇಷ್ಠವಾದ ಸ್ವಭಾವಗುಣಗಳು, ಉನ್ನತವಾದ ಶಿಷ್ಟಾಚಾರಗಳು ಮೊದಲಾದ ಅವರ (ಸೃಷ್ಟಿಗಳ) ಧಾರ್ಮಿಕ ಮತ್ತು ಐಹಿಕ ಜೀವನದಲ್ಲಿ ಅವರಿಗೆ ಹಿತವನ್ನು ತರುವ ಹಾಗೂ ಅವರ ಸ್ಥಿತಿಗತಿಗಳನ್ನು ನೇರವಾಗಿಸುವ ಎಲ್ಲವನ್ನೂ ವಿವರಿಸಿಕೊಟ್ಟಿದ್ದಾನೆ. ಹಾಗೆ ಪ್ರವಾದಿ(ﷺ)ರವರು ತಮ್ಮ ಸಮುದಾಯವನ್ನು **'ಬೆಳ್ಳಗೆ ಬೆಳಗುವ ಪಥದಲ್ಲಿ ಬಿಟ್ಟು ಹೋದರು. ಅದರ ರಾತ್ರಿಯು ಹಗಲಿನಂತಿದೆ. (ಸ್ವಯಂ) ನಾಶಕ್ಕೀಡಾದವನ ಹೊರತು ಯಾರೂ ಅದರಿಂದ ವ್ಯತಿಚಲಿಸಲಾರರು.'**(1)

ಅಲ್ಲಾಹು ಮತ್ತು ಅವನ ಸಂದೇಶವಾಹಕ(ﷺ)ರವರ ಕರೆಗೆ ಸ್ಪಂದಿಸಿದ ಅವರ ಸಮುದಾಯವು ಆ ಪಥದಲ್ಲೇ ಚಲಿಸಿತು. ಅವರು ಸಹಾಬಾಗಳಲ್ಲಿ, ತಾಬಿಊನ್‌ಗಳಲ್ಲಿ ಮತ್ತು ಅವರನ್ನು ವಸ್ತುನಿಷ್ಠವಾಗಿ ಅನುಸರಿಸಿದ ಅವರ ಹಿಂಬಾಲಕರಲ್ಲಿ ಸೇರಿದ ಸೃಷ್ಟಿಗಳಲ್ಲೇ ಶ್ರೇಷ್ಠರಾಗಿದ್ದಾರೆ. ಅಕೀದಃ (ವಿಶ್ವಾಸ), ಇಬಾದಃ (ಆರಾಧನೆ), ಖುಲ್ಕ್ (ಸ್ವಭಾವ), ಅದಬ್ (ಶಿಷ್ಟಾಚಾರ) ಇತ್ಯಾದಿಗಳಲ್ಲಿ ಅವರು ಪ್ರವಾದಿ(ﷺ)ರವರ ಶರೀಅತ್ತನ್ನು ಕಾರ್ಯರೂಪಕ್ಕಿಳಿಸಿದರು, ಅವರ ಸುನ್ನತ್ತನ್ನು ಗಟ್ಟಿಯಾಗಿ ಹಿಡಿದರು

**1**. ನೋಡಿ: 'ಸುನನ್ ಇಬ್ನ್ ಮಾಜ' (1/16; ಹದೀಸ್ ನಂ. 43). ಶೈಖ್ ಅಲ್ಬಾನೀ ತನ್ನ 'ಸಿಲ್ಸಿಲತು ಸ್ಸಹೀಹಃ'ದಲ್ಲಿ (2/648; ಹದೀಸ್ ನಂ. 937) ಇದನ್ನು ಸಹೀಹ್ ಎಂದಿದ್ದಾರೆ.

ಮತ್ತು ಅದನ್ನು ತಮ್ಮ ದವಡೆ ಹಲ್ಲುಗಳಿಂದ ಬಲವಾಗಿ ಕಚ್ಚಿಕೊಂಡರು. ಹಾಗೆ ಅವರು ಸತ್ಯದಲ್ಲಿ ದೃಢವಾಗಿ ಬೇರೂರಿ ನಿಲ್ಲುವ ಪಂಗಡವಾಗಿ ಮಾರ್ಪಟ್ಟರು. ಅಲ್ಲಾಹನ ಆಜ್ಞೆ ಬರುವ ತನಕ ಅವರು ಅದರಲ್ಲೇ ಬೇರೂರಿ ನಿಲ್ಲುವವರಾಗಿರುವರು ಮತ್ತು ಅವರನ್ನು ತೊರೆದ ಅಥವಾ ವಿರೋಧಿಸಿದ ಯಾರಿಗೂ ಅವರಿಗೆ ಯಾವುದೇ ತೊಂದರೆಯನ್ನು ಮಾಡಲು ಸಾಧ್ಯವಿಲ್ಲ.

ನಾವು –ಅಲ್ಲಾಹನಿಗೆ ಸ್ತುತಿ– ಅವರ ಹೆಜ್ಜೆಗುರುತುಗಳಲ್ಲೇ ಚಲಿಸುವವರಾಗಿದ್ದೇವೆ. ಕಿತಾಬ್ (ಕುರ್‌ಆನ್) ಮತ್ತು ಸುನ್ನತ್‌ನ ಬೆಂಬಲವಿರುವ ಅವರ ಚರ್ಯೆಯಿಂದ ನಾವು ಮಾರ್ಗದರ್ಶನ ಪಡೆಯುತ್ತಿದ್ದೇವೆ. ನಾವಿದನ್ನು ಹೇಳುತ್ತಿರುವುದು ಅಲ್ಲಾಹನ ಅನುಗ್ರಹವನ್ನು ತಿಳಿಸಿಕೊಡುವ ಸಲುವಾಗಿದೆ ಮತ್ತು ಪ್ರತಿಯೊಬ್ಬ ವಿಶ್ವಾಸಿಯೂ ಹೀಗೇ ಇರಬೇಕಾದುದು ಕಡ್ಡಾಯವೆಂದು ವಿವರಿಸಿಕೊಡುವ ಸಲುವಾಗಿದೆ.

ಇಹಲೋಕದಲ್ಲೂ ಪರಲೋಕದಲ್ಲೂ ದೃಢವಾದ ವಚನದ ಮೇಲೆ ನಮ್ಮನ್ನು ಮತ್ತು ನಮ್ಮ ಮುಸ್ಲಿಮ್ ಸಹೋದರರನ್ನು ದೃಢವಾಗಿ ಬೇರೂರಿಸಬೇಕೆಂದು ನಾವು ಅಲ್ಲಾಹನೊಂದಿಗೆ ಬೇಡುತ್ತಿದ್ದೇವೆ. ಅವನ ವತಿಯ ಅನುಗ್ರಹವನ್ನು ನಮಗೆ ಉದಾರವಾಗಿ ಕರುಣಿಸಬೇಕೆಂದೂ ನಾವು ಬೇಡುತ್ತಿದ್ದೇವೆ. ಖಂಡಿತವಾಗಿಯೂ ಅವನು ಅತ್ಯಂತ ಉದಾರವಾಗಿ ಕರುಣಿಸುವವನಾಗಿದ್ದಾನೆ.

ಈ ಪ್ರಬಂಧದ ಪ್ರಾಮುಖ್ಯತೆಯ ಕುರಿತು ಹೇಳುವುದಾದರೆ, ಈ ವಿಷಯದಲ್ಲಿ (ಅಕೀದಃದ ವಿಷಯದಲ್ಲಿ) ಜನರ ಭಾವನೆಗಳು ಭಿನ್ನಭಿನ್ನವಾಗಿ ಹೋಗಿವೆ. ಆದ್ದರಿಂದ ನಮ್ಮ ಈ ಅಕೀದಃವನ್ನು –ಅಂದರೆ ಅಹ್ಲು ಸ್ಸುನ್ನಃ ವಲ್‌ಜಮಾಅಃದ ಅಕೀದಃವನ್ನು– ಸಂಕ್ಷಿಪ್ತವಾಗಿ ಬರೆಯಲು ನಾನು ಇಚ್ಛೆಪಟ್ಟೆ. ನಮ್ಮ ಅಕೀದಃ ಏನೆಂದರೆ ಅಲ್ಲಾಹನಲ್ಲಿ, ಅವನ ಮಲಕ್‌ಗಳಲ್ಲಿ, ಅವನ ಗ್ರಂಥಗಳಲ್ಲಿ, ಅವನ ಸಂದೇಶವಾಹಕರಲ್ಲಿ, ಅಂತ್ಯದಿನದಲ್ಲಿ ಮತ್ತು ಕದರ್‌ನಲ್ಲಿ –ಅದರ ಒಳಿತು ಮತ್ತು ಕೆಡುಕುಗಳಲ್ಲಿ– ಇರುವ ವಿಶ್ವಾಸವಾಗಿದೆ. ಅಲ್ಲಾಹನ ಪ್ರೀತಿಯನ್ನು ಮಾತ್ರ ಆಶಿಸುವ ಒಂದು ಸತ್ಕರ್ಮವಾಗಿ ಅಲ್ಲಾಹು ಇದನ್ನು ಮಾಡಬೇಕೆಂದು, ಅವನ ತೃಪ್ತಿಗೆ ಅನುಯೋಜ್ಯವಾಗಿಸಬೇಕೆಂದು ಮತ್ತು ಅವನ ಸೃಷ್ಟಿಗಳಿಗೆ ಪ್ರಯೋಜನಕಾರಿಯಾಗಿಸಬೇಕೆಂದು ನಾನು ಅವನೊಂದಿಗೆ ಬೇಡುತ್ತಿದ್ದೇನೆ.

## عقيـدتنـا

## ನಮ್ಮ ಅಕೀದಃ (ವಿಶ್ವಾಸ)

ನಮ್ಮ ಅಕೀದಃ (ವಿಶ್ವಾಸ)ವು– ಅಲ್ಲಾಹನಲ್ಲಿ, ಅವನ ಮಲಕ್‌ಗಳಲ್ಲಿ, ಅವನ ಗ್ರಂಥಗಳಲ್ಲಿ, ಅವನ ಸಂದೇಶವಾಹಕರಲ್ಲಿ, ಅಂತ್ಯದಿನದಲ್ಲಿ ಮತ್ತು ಕದರ್‌ನಲ್ಲಿ –ಅದರ ಒಳಿತು ಮತ್ತು ಕೆಡುಕುಗಳಲ್ಲಿ– ವಿಶ್ವಾಸವಿಡುವುದಾಗಿದೆ.

## الإيمــان بالله

## ಅಲ್ಲಾಹನಲ್ಲಿರುವ ವಿಶ್ವಾಸ

ನಾವು ಅಲ್ಲಾಹನ ರುಬೂಬಿಯತ್ (ಪ್ರಭುತ್ವ)ನಲ್ಲಿ ವಿಶ್ವಾಸವಿಡುತ್ತೇವೆ. ಅಂದರೆ ಅವನು ಅರ್‍ರಬ್ಬ್ (ಪ್ರಭು), ಅಲ್‌ಖಾಲಿಕ್ (ಸೃಷ್ಟಿಕರ್ತ), ಅಲ್‌ಮಲಿಕ್ (ಪರಮಾಧಿಕಾರವಿರುವ ಯಜಮಾನ) ಮತ್ತು ಅಲ್‌ಮುದಬ್ಬಿರು ಲಿಜಮೀಇಲ್ ಉಮೂರ್ (ಎಲ್ಲ ವಿಷಯಗಳನ್ನೂ ನಿಯಂತ್ರಿಸಿ ಕಾರ್ಯರೂಪಕ್ಕಿಳಿಸುವವನು) ಆಗಿದ್ದಾನೆ.

ನಾವು ಅಲ್ಲಾಹನ ಉಲೂಹಿಯ್ಯತ್ (ದೈವಿಕತೆ ಮತ್ತು ಆರಾಧನಾರ್ಹತೆ)ನಲ್ಲಿ ವಿಶ್ವಾಸವಿಡುತ್ತೇವೆ. ಅಂದರೆ ಅವನು ಸತ್ಯವಾದ ಆರಾಧ್ಯನಾಗಿದ್ದಾನೆ. ಅವನ ಹೊರತಾದ ಸರ್ವ ಆರಾಧ್ಯರೂ ಮಿಥ್ಯವಾಗಿದ್ದಾರೆ.

ನಾವು ಅಲ್ಲಾಹನ ಅಲ್‌ಅಸ್ಮಾಅ್ (ನಾಮಗಳು) ಮತ್ತು ಅಸ್ಸಿಫಾತ್ (ವಿಶೇಷಣಗಳು) ನಲ್ಲಿ ವಿಶ್ವಾಸವಿಡುತ್ತೇವೆ. ಅಂದರೆ ಅವನಿಗೆ ಅತ್ಯುತ್ತಮವಾದ ನಾಮಗಳಿವೆ ಮತ್ತು ಅತ್ಯುನ್ನತವಾದ, ಸಮಗ್ರವಾದ ವಿಶೇಷಣಗಳಿವೆ.

ನಾವು ಇವುಗಳಲ್ಲಿರುವ ವಹ್ದಾನಿಯ್ಯತ್ (ಏಕೈಕತೆ)ನಲ್ಲಿ ವಿಶ್ವಾಸವಿಡುತ್ತೇವೆ. ಅಂದರೆ ಅವನ ರುಬೂಬಿಯ್ಯತ್‌ನಲ್ಲಿ, ಅವನ ಉಲೂಹಿಯ್ಯತ್‌ನಲ್ಲಿ ಮತ್ತು ಅವನ ಅಲ್‌ಅಸ್ಮಾಉ ವಸ್ಸಿಫಾತ್‌ನಲ್ಲಿ (ಅವನು ಏಕೈಕನಾಗಿದ್ದಾನೆ) ಅವನಿಗೆ ಯಾವ ಪಾಲುದಾರರೂ ಇಲ್ಲ.

ಅಲ್ಲಾಹು ತಆಲಾ ಹೇಳಿದ್ದಾನೆ:

﴿رَّبُّ ٱلسَّمَـٰوَٰتِ وَٱلْأَرْضِ وَمَا بَيْنَهُمَا فَٱعْبُدْهُ وَٱصْطَبِرْ لِعِبَـٰدَتِهِۦ ۚ هَلْ تَعْلَمُ لَهُۥ سَمِيًّا ﴿٦٥﴾﴾

**“ಆಕಾಶಗಳ, ಭೂಮಿಯ ಮತ್ತು ಅವುಗಳ ನಡುವೆಯಿರುವ ಎಲ್ಲದರ ಪ್ರಭು. ಆದ್ದರಿಂದ ಅವನನ್ನು (ಮಾತ್ರ) ಆರಾಧಿಸು ಮತ್ತು ಅವನ ಆರಾಧನೆಯಲ್ಲಿ ಅಚಲವಾಗಿರು**

ಹಾಗೂ ಸಹನೆಯಿಂದಿರು. ಅವನಿಗೆ ಸರಿಸಮಾನರಾಗಿರುವ ಯಾರನ್ನಾದರೂ ನೀನು ತಿಳಿದಿರುವೆಯಾ?" (ಕುರ್‌ಆನ್ 19/65)[2]

﴿ ٱللَّهُ لَآ إِلَٰهَ إِلَّا هُوَ ٱلۡحَيُّ ٱلۡقَيُّومُۚ لَا تَأۡخُذُهُۥ سِنَةٞ وَلَا نَوۡمٞۚ لَّهُۥ مَا فِي ٱلسَّمَٰوَٰتِ وَمَا فِي ٱلۡأَرۡضِۗ مَن ذَا ٱلَّذِي يَشۡفَعُ عِندَهُۥٓ إِلَّا بِإِذۡنِهِۦۚ يَعۡلَمُ مَا بَيۡنَ أَيۡدِيهِمۡ وَمَا خَلۡفَهُمۡۖ وَلَا يُحِيطُونَ بِشَيۡءٖ مِّنۡ عِلۡمِهِۦٓ إِلَّا بِمَا شَآءَۚ وَسِعَ كُرۡسِيُّهُ ٱلسَّمَٰوَٰتِ وَٱلۡأَرۡضَۖ وَلَا يَـُٔودُهُۥ حِفۡظُهُمَاۚ وَهُوَ ٱلۡعَلِيُّ ٱلۡعَظِيمُ ٢٥٥ ﴾

"ಅಲ್ಲಾಹು! ಅವನ ಹೊರತು ಆರಾಧನೆಗೆ ಅರ್ಹರಾಗಿ ಅನ್ಯರಿಲ್ಲ. ಅವನು ಎಂದೆಂದಿಗೂ ಜೀವಿಸಿರುವವನೂ, ಸರ್ವ ಸೃಷ್ಟಿಗಳನ್ನೂ ಸದಾ ಪರಿಪಾಲಿಸುತ್ತಿರುವವನೂ ಆಗಿದ್ದಾನೆ. ತೂಕಡಿಕೆಯಾಗಲಿ, ನಿದ್ದೆಯಾಗಲಿ ಅವನನ್ನು ವಶಪಡಿಸುವುದಿಲ್ಲ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅವನಿಗೆ ಸೇರಿದ್ದಾಗಿವೆ. ಅವನ ಅಪ್ಪಣೆಯ ಹೊರತು ಅವನ ಬಳಿ ಶಿಫಾರಸ್ಸು ಮಾಡಬಲ್ಲವನು ಯಾರಿದ್ದಾನೆ? ಅವರಿಗೆ (ಅವನ ಸೃಷ್ಟಿಗಳಿಗೆ) ಇಹಲೋಕದಲ್ಲಿ ಏನಾಗುವುದು ಮತ್ತು ಅವರಿಗೆ ಪರಲೋಕದಲ್ಲಿ ಏನಾಗಲಿದೆಯೆಂಬುದನ್ನು ಅವನು ಅರಿತಿದ್ದಾನೆ. ಅವನು ಇಚ್ಛಿಸಿದವುಗಳ ಹೊರತು ಅವನ ಜ್ಞಾನದಿಂದ ಏನನ್ನಾದರೂ ಆವರಿಸಿಕೊಳ್ಳಲು ಅವರಿಗೆ ಸಾಧ್ಯವಾಗಲಾರದು. ಅವನ ಕುರ್ಸೀ[3] (ಪಾದಪೀಠ) ಆಕಾಶಗಳ ಮತ್ತು ಭೂಮಿಯಷ್ಟು ವಿಶಾಲವಾಗಿದೆ. ಅವುಗಳ (ಆಕಾಶಗಳ ಮತ್ತು ಭೂಮಿಯ) ಸಂರಕ್ಷಣೆಯು ಅವನನ್ನು ದಣಿಸುವುದಿಲ್ಲ. ಅವನು ಅತ್ಯುನ್ನತವಾಗಿರುವವನೂ ಮಹಾನನೂ ಆಗಿದ್ದಾನೆ." (ಕುರ್‌ಆನ್ 2/255) ಎಂದು ನಾವು ವಿಶ್ವಾಸವಿಡುತ್ತೇವೆ.

﴿ هُوَ ٱللَّهُ ٱلَّذِي لَآ إِلَٰهَ إِلَّا هُوَۖ عَٰلِمُ ٱلۡغَيۡبِ وَٱلشَّهَٰدَةِۖ هُوَ ٱلرَّحۡمَٰنُ ٱلرَّحِيمُ ٢٢ هُوَ ٱللَّهُ ٱلَّذِي لَآ إِلَٰهَ إِلَّا هُوَ ٱلۡمَلِكُ ٱلۡقُدُّوسُ ٱلسَّلَٰمُ ٱلۡمُؤۡمِنُ ٱلۡمُهَيۡمِنُ

---

**2**. ಅಲ್ಲಾಹನ ರುಬೂಬಿಯ್ಯತ್, ಉಲೂಹಿಯ್ಯತ್ ಮತ್ತು ಅಲ್‌ಅಸ್ಮಾಉ ವಸ್ಸಿಫಾತ್ ಎಂಬ ಮೂರನ್ನೂ ಈ ಆಯತ್ ಒಳಗೊಂಡಿದೆ. ಆಕಾಶಗಳ, ಭೂಮಿಯ ಮತ್ತು ಅವುಗಳ ನಡುವೆಯಿರುವ ಎಲ್ಲದರ ಪ್ರಭು ಎಂಬುದು ಅವನ ರುಬೂಬಿಯ್ಯತ್ತನ್ನು ಸೂಚಿಸುತ್ತದೆ. ಅವನನ್ನು (ಮಾತ್ರ) ಆರಾಧಿಸು ಎಂಬುದು ಅವನ ಉಲೂಹಿಯ್ಯತ್ತನ್ನು ಸೂಚಿಸುತ್ತದೆ ಮತ್ತು ಅವನಿಗೆ ಸರಿಸಮಾನರಾಗಿರುವ ಯಾರನ್ನಾದರೂ ನೀನು ತಿಳಿದಿರುವೆಯಾ? ಎಂಬುದು ಅವನ ಅಲ್‌ಅಸ್ಮಾಉ ವಸ್ಸಿಫಾತ್ತನ್ನು ಸೂಚಿಸುತ್ತದೆ.

**3**. ಇಬ್ನ್ ಅಬ್ಬಾಸ್(ﷺ)ರವರು ಹೇಳಿದ್ದಾರೆ: 'ಕುರ್ಸೀ ಎಂದರೆ ಪಾದಪೀಠವಾಗಿದೆ.' ಇದನ್ನು ತಬರೀ ತನ್ನ 'ತಫ್ಸೀರ್'ನಲ್ಲಿ (3/110) ಮತ್ತು ಹಾಕಿಮ್ ತನ್ನ 'ಮುಸ್ತದ್ರಕ್'ನಲ್ಲಿ (2/310; ಹದೀಸ್ ನಂ. 3116) ಉದ್ಧರಿಸಿದ್ದಾರೆ. ಹಾಕಿಮ್ ಇದನ್ನು ಸಹೀಹ್ ಎಂದಿದ್ದಾರೆ. ನೋಡಿ: 'ಮುಖ್ತಸರುಲ್ ಉಲುವ್ವ್' (ಹದೀಸ್ ನಂ. 45)

'ಕುರ್ಸೀ ಎಂದರೆ ಅಲ್ಲಾಹನ ಜ್ಞಾನವಾಗಿದೆ' ಎಂದು ಇಬ್ನ್ ಅಬ್ಬಾಸ್(ﷺ)ರವರು ಹೇಳಿದ್ದಾರೆಂದು ಹೇಳಲಾಗುವ ಅಸರ್ ದುರ್ಬಲವಾಗಿದೆ. ನೋಡಿ: 'ಮಜ್ಮೂಅ್ ಫತಾವಾ ಇಬ್ನ್ ತೈಮಿಯ್ಯಃ' (6/584), ಸಿಲ್ಸಿಲತು ಸ್ಸಹೀಹಃ (1/174; ಹದೀಸ್ ನಂ. 109).

ٱلْعَزِيزُ ٱلْجَبَّارُ ٱلْمُتَكَبِّرُ ۚ سُبْحَـٰنَ ٱللَّهِ عَمَّا يُشْرِكُونَ ﴿٢٣﴾ هُوَ ٱللَّهُ ٱلْخَـٰلِقُ
ٱلْبَارِئُ ٱلْمُصَوِّرُ ۖ لَهُ ٱلْأَسْمَآءُ ٱلْحُسْنَىٰ ۚ يُسَبِّحُ لَهُۥ مَا فِى ٱلسَّمَـٰوَٰتِ وَٱلْأَرْضِ ۖ وَهُوَ ٱلْعَزِيزُ
ٱلْحَكِيمُ ﴿٢٤﴾ ﴾

"ಅವನಾಗಿದ್ದಾನೆ ಅಲ್ಲಾಹು. ಅವನ ಹೊರತು ಆರಾಧಿಸಲರ್ಹರಾಗಿ ಅನ್ಯರಿಲ್ಲ. ಅವನು ಅಗೋಚರ ಮತ್ತು ಗೋಚರವಾಗಿರುವವುಗಳನ್ನು ಅರಿತುಕೊಂಡಿರುವವನಾಗಿದ್ದಾನೆ. ಅವನು ಪರಮ ದಯಾಮಯನೂ ಪರಮ ಕರುಣೆಯುಳ್ಳವನೂ ಆಗಿದ್ದಾನೆ. ಅವನಾಗಿದ್ದಾನೆ ಅಲ್ಲಾಹು. ಅವನ ಹೊರತು ಆರಾಧಿಸಲರ್ಹರಾಗಿ ಅನ್ಯರಿಲ್ಲ. ಅವನು ಸಾಮ್ರಾಟನು, ಪವಿತ್ರನು, ಸರ್ವ ನ್ಯೂನತೆಗಳಿಂದಲೂ ಮುಕ್ತನಾದವನು, ನಿರ್ಭಯತೆಯನ್ನು ನೀಡುವವನು, ತನ್ನ ಸೃಷ್ಟಿಗಳ ಮೇಲ್ನೋಟ ವಹಿಸುವವನು, ಪ್ರತಾಪವಿರುವವನು, ನಿರ್ಬಂಧಿಸುವವನು ಮತ್ತು ಪರಮಶ್ರೇಷ್ಠನು. ಅವರು ಸಹಭಾಗಿಗಳನ್ನು ಕಲ್ಪಿಸುವುದಕ್ಕಿಂತಲೂ ಅಲ್ಲಾಹು ಎಷ್ಟೋ ಪರಿಪಾವನನಾಗಿದ್ದಾನೆ. ಅವನಾಗಿದ್ದಾನೆ ಅಲ್ಲಾಹು. ಅವನು ಸೃಷ್ಟಿಕರ್ತನು, ನಿರ್ಮಾತೃನು ಮತ್ತು ರೂಪವನ್ನು ನೀಡುವವನು. ಅತ್ಯುತ್ತಮವಾದ ನಾಮಗಳು ಅವನಿಗೆ ಸೇರಿದ್ದಾಗಿವೆ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅವನ ಪರಿಪಾವನತೆಯನ್ನು ಕೊಂಡಾಡುತ್ತಿವೆ. ಅವನು ಪ್ರತಾಪಿಯೂ, ಚಾಣಾಕ್ಷನೂ ಆಗಿದ್ದಾನೆ." (ಕುರ್‌ಆನ್ 59/22–24) ಎಂದು ನಾವು ವಿಶ್ವಾಸವಿಡುತ್ತೇವೆ.

ಆಕಾಶಗಳ ಮತ್ತು ಭೂಮಿಯ ಪರಮಾಧಿಕಾರವು ಅವನಿಗೆ ಸೇರಿದ್ದಾಗಿದೆ...

﴿ يَخْلُقُ مَا يَشَآءُ ۚ يَهَبُ لِمَن يَشَآءُ إِنَـٰثًا وَيَهَبُ لِمَن يَشَآءُ ٱلذُّكُورَ ﴿٤٩﴾ أَوْ يُزَوِّجُهُمْ
ذُكْرَانًا وَإِنَـٰثًا ۖ وَيَجْعَلُ مَن يَشَآءُ عَقِيمًا ۚ إِنَّهُۥ عَلِيمٌ قَدِيرٌ ﴿٥٠﴾ ﴾

"ಅವನಿಚ್ಛಿಸಿದ್ದನ್ನು ಅವನು ಸೃಷ್ಟಿಸುತ್ತಾನೆ. ಅವನಿಚ್ಛಿಸಿದವರಿಗೆ ಅವನು ಹೆಣ್ಣು ಸಂತತಿಯನ್ನು ನೀಡುತ್ತಾನೆ ಮತ್ತು ಅವನಿಚ್ಛಿಸಿದವರಿಗೆ ಅವನು ಗಂಡು ಸಂತತಿಯನ್ನು ನೀಡುತ್ತಾನೆ. ಅಥವಾ (ಅವನಿಚ್ಛಿಸಿದವರಿಗೆ) ಅವನು ಗಂಡು ಮತ್ತು ಹೆಣ್ಣು ಸಂತತಿಗಳೆರಡನ್ನೂ ನೀಡುತ್ತಾನೆ ಮತ್ತು ಅವನಿಚ್ಛಿಸಿದವರನ್ನು ಅವನು ಬಂಜೆಯಾಗಿ ಮಾಡುತ್ತಾನೆ. ಅವನು ಎಲ್ಲವನ್ನು ಅರಿಯುವವನೂ ಅಗಾಧ ಸಾಮರ್ಥ್ಯವಿರುವವನೂ ಆಗಿದ್ದಾನೆ." (ಕುರ್‌ಆನ್ 42/49–50) ಎಂದು ನಾವು ವಿಶ್ವಾಸವಿಡುತ್ತೇವೆ.

﴿ لَيْسَ كَمِثْلِهِۦ شَىْءٌ ۖ وَهُوَ ٱلسَّمِيعُ ٱلْبَصِيرُ ﴿١١﴾ لَهُۥ مَقَالِيدُ ٱلسَّمَـٰوَٰتِ
وَٱلْأَرْضِ ۖ يَبْسُطُ ٱلرِّزْقَ لِمَن يَشَآءُ وَيَقْدِرُ ۚ إِنَّهُۥ بِكُلِّ شَىْءٍ عَلِيمٌ ﴿١٢﴾ ﴾

"ಅವನಿಗೆ ಹೋಲಿಕೆಯಾಗಿ ಏನೊಂದೂ ಇಲ್ಲ. ಅವನು ಎಲ್ಲವನ್ನೂ ಆಲಿಸುವವನೂ ಕಾಣುವವನೂ ಆಗಿದ್ದಾನೆ. ಆಕಾಶಗಳ ಮತ್ತು ಭೂಮಿಯ ಕೀಲಿಕೈಗಳು ಅವನಿಗೆ ಸೇರಿದ್ದಾಗಿವೆ. ಅವನಿಚ್ಛಿಸಿದವರಿಗೆ ಅವನು ಅನ್ನಾಧಾರಗಳನ್ನು ವಿಶಾಲಗೊಳಿಸುತ್ತಾನೆ ಮತ್ತು (ಅವನಿಚ್ಛಿಸಿದವರಿಗೆ ಅದನ್ನು) ಕಡಿತಗೊಳಿಸುತ್ತಾನೆ. ಅವನು ಪ್ರತಿಯೊಂದು

**ವಸ್ತುವಿನ ಕುರಿತೂ ಅರಿವುಳ್ಳವನಾಗಿದ್ದಾನೆ."** (ಕುರ್‌ಆನ್ 42/11-12) ಎಂದು ನಾವು ವಿಶ್ವಾಸವಿಡುತ್ತೇವೆ.

﴿ ۞ وَمَا مِن دَآبَّةٍ فِي ٱلْأَرْضِ إِلَّا عَلَى ٱللَّهِ رِزْقُهَا وَيَعْلَمُ مُسْتَقَرَّهَا وَمُسْتَوْدَعَهَا ۚ كُلٌّ فِي كِتَٰبٍ مُّبِينٍ ٦ ﴾

**"ಭೂಮಿಯ ಮೇಲೆ ಒಂದೇ ಒಂದು ಜೀವಿಯೂ ಇಲ್ಲ, ಅದಕ್ಕೆ ಅನ್ನಾಧಾರ ಒದಗಿಸುವ ಹೊಣೆ ಅಲ್ಲಾಹನ ಮೇಲಿರದೆ. ಅವನು ಅದರ ವಾಸಸ್ಥಳವನ್ನೂ ವಿಶ್ರಮ ಸ್ಥಾನವನ್ನೂ ಅರಿತಿದ್ದಾನೆ. ಎಲ್ಲವೂ ಒಂದು ಸ್ಪಷ್ಟವಾದ ಗ್ರಂಥದಲ್ಲಿದೆ"** (ಕುರ್‌ಆನ್ 11/16) ಎಂದು ನಾವು ವಿಶ್ವಾಸವಿಡುತ್ತೇವೆ.

﴿ ۞ وَعِندَهُۥ مَفَاتِحُ ٱلْغَيْبِ لَا يَعْلَمُهَآ إِلَّا هُوَ ۚ وَيَعْلَمُ مَا فِي ٱلْبَرِّ وَٱلْبَحْرِ ۚ وَمَا تَسْقُطُ مِن وَرَقَةٍ إِلَّا يَعْلَمُهَا وَلَا حَبَّةٍ فِي ظُلُمَٰتِ ٱلْأَرْضِ وَلَا رَطْبٍ وَلَا يَابِسٍ إِلَّا فِي كِتَٰبٍ مُّبِينٍ ٥٩ ﴾

**"ಅಗೋಚರ ವಿಷಯಗಳ ಕೀಲಿಕೈಗಳು ಅವನ ಬಳಿಯಿವೆ. ಅವುಗಳನ್ನು (ಅಗೋಚರ ವಿಷಯಗಳನ್ನು) ಅವನ ಹೊರತು ಯಾರೂ ಅರಿತಿಲ್ಲ. ದಡ (ನೆಲ)ದಲ್ಲಿ ಮತ್ತು ಸಮುದ್ರದಲ್ಲಿ ಏನೆಲ್ಲಾ ಇದೆಯೆಂದು ಅವನಿಗೆ ತಿಳಿದಿದೆ. ಒಂದೇ ಒಂದು ಎಲೆಯೂ ಉದುರುವುದಿಲ್ಲ, ಅವನಿಗೆ ಅದು ತಿಳಿಯದಿರುವ ಹೊರತು. ಭೂಮಿಯ ಅಂಧಕಾರಗಳಲ್ಲಿ ಒಂದೇ ಒಂದು ಧಾನ್ಯವೂ ಇಲ್ಲ, ಹಸಿಯಾಗಿರುವುದಾಗಲಿ ಒಣಗಿದ್ದಾಗಿರುವುದಾಗಲಿ ಏನೊಂದೂ ಇಲ್ಲ, ಸ್ಪಷ್ಟವಾದ ಒಂದು ಗ್ರಂಥದಲ್ಲಿ (ಅವುಗಳನ್ನು) ಉಲ್ಲೇಖಿಸಲಾಗಿರುವ ಹೊರತು"** (ಕುರ್‌ಆನ್ 6/59) ಎಂದು ನಾವು ವಿಶ್ವಾಸವಿಡುತ್ತೇವೆ.

﴿ إِنَّ ٱللَّهَ عِندَهُۥ عِلْمُ ٱلسَّاعَةِ وَيُنَزِّلُ ٱلْغَيْثَ وَيَعْلَمُ مَا فِي ٱلْأَرْحَامِ ۖ وَمَا تَدْرِي نَفْسٌ مَّاذَا تَكْسِبُ غَدًا ۖ وَمَا تَدْرِي نَفْسٌۢ بِأَيِّ أَرْضٍ تَمُوتُ ۚ إِنَّ ٱللَّهَ عَلِيمٌ خَبِيرٌ ٣٤ ﴾

**"ಖಂಡಿತವಾಗಿಯೂ ಅಂತ್ಯದಿನದ ಜ್ಞಾನವು ಅಲ್ಲಾಹನ ಬಳಿ ಮಾತ್ರ ಇದೆ. ಅವನು ಮಳೆಯನ್ನು ಇಳಿಸುತ್ತಾನೆ ಮತ್ತು ಗರ್ಭಾಶಯಗಳೊಳಗೆ ಏನಿದೆಯೆಂಬುದನ್ನು ಅರಿತಿದ್ದಾನೆ[(4)]. ತಾನು ನಾಳೆ ಏನನ್ನು ಸಂಪಾದಿಸುವೆನು ಎಂದು ಯಾವೊಂದು ಶರೀರಕ್ಕೂ ತಿಳಿದಿಲ್ಲ. ತಾನು ಯಾವ ಭೂಮಿಯಲ್ಲಿ ಮರಣಹೊಂದುವೆನೆಂದು ಕೂಡ ಯಾವ**

---

**4.** ಶೈಖ್ ಉಸೈಮೀನ್‌ರವರು ತನ್ನ 'ಮಜ್ಮೂಉಲ್ ಫತಾವಾ ವರ್‍ರಸಾಇಲ್'ನಲ್ಲಿ (5/273-274) ಹೇಳಿರುವಂತೆ ಇದು ಕೇವಲ ಶಿಶುವಿನ ಲಿಂಗವನ್ನು ಅರಿಯುವುದಕ್ಕೆ ಸೀಮಿತವಲ್ಲ. ಆ ಶಿಶು ಸೌಭಾಗ್ಯಶಾಲಿಯಾಗಲಿದೆಯೋ ಅಥವಾ ದೌರ್ಭಾಗ್ಯಶಾಲಿಯಾಗಲಿದೆಯೋ, ಧನಿಕನಾಗಲಿದೆಯೋ ಅಥವಾ ದರಿದ್ರನಾಗಲಿದೆಯೋ ಎಂಬುದನ್ನೂ ಇದು ಒಳಗೊಂಡಿರುತ್ತದೆ.

**ಶರೀರಕ್ಕೂ ತಿಳಿದಿಲ್ಲ. ಖಂಡಿತವಾಗಿಯೂ ಅಲ್ಲಾಹು ಎಲ್ಲವನ್ನೂ ಅರಿತಿರುವವನೂ ಸೂಕ್ಷ್ಮಜ್ಞಾನಿಯೂ ಆಗಿದ್ದಾನೆ"** (ಕುರ್‌ಆನ್ 31/34) ಎಂದು ನಾವು ವಿಶ್ವಾಸವಿಡುತ್ತೇವೆ.

ಅಲ್ಲಾಹು ಅವನಿಚ್ಚಿಸುವುದರೊಂದಿಗೆ, ಅವನಿಚ್ಚಿಸುವಾಗ ಮತ್ತು ಅವನಿಚ್ಚಿಸುವ ವಿಧದಲ್ಲಿ ಮಾತನಾಡುತ್ತಾನೆ ಎಂದು ನಾವು ವಿಶ್ವಾಸವಿಡುತ್ತೇವೆ.

﴿ وَكَلَّمَ ٱللَّهُ مُوسَىٰ تَكۡلِيمًا ١٦٤ ﴾

**"ಮತ್ತು ಅಲ್ಲಾಹು ಮೂಸಾನೊಂದಿಗೆ ನೇರವಾಗಿ (ಯಾವ ಮಧ್ಯವರ್ತಿಯೂ ಇಲ್ಲದೆ) ಮಾತನಾಡಿದನು."** (ಕುರ್‌ಆನ್ 4/164)

﴿ وَلَمَّا جَآءَ مُوسَىٰ لِمِيقَٰتِنَا وَكَلَّمَهُۥ رَبُّهُۥ ﴾

**"ಮತ್ತು ಮೂಸಾ ನಮ್ಮ ನಿಗದಿತ (ವೇಳೆಗೆ ಮತ್ತು ಸ್ಥಳಕ್ಕೆ) ಬಂದಾಗ ಮತ್ತು ಅವನ ಪ್ರಭು ಅವನೊಂದಿಗೆ ಮಾತನಾಡಿದಾಗ."** (ಕುರ್‌ಆನ್ 7/143)

﴿ وَنَٰدَيۡنَٰهُ مِن جَانِبِ ٱلطُّورِ ٱلۡأَيۡمَنِ وَقَرَّبۡنَٰهُ نَجِيّٗا ٥٢ ﴾

**"ಮತ್ತು ಪರ್ವತದ ಬಲಭಾಗದಿಂದ ನಾವು ಅವನನ್ನು (ಮೂಸಾನನ್ನು) ಕರೆದೆವು, ಮತ್ತು ಒಂದು ಮಾತುಕತೆಗಾಗಿ ಅವನನ್ನು ನಮ್ಮ ಸಮೀಪಕ್ಕೆ ನಿಕಟಗೊಳಿಸಿದೆವು."** (ಕುರ್‌ಆನ್ 19/52)

﴿ قُل لَّوۡ كَانَ ٱلۡبَحۡرُ مِدَادٗا لِّكَلِمَٰتِ رَبِّي لَنَفِدَ ٱلۡبَحۡرُ قَبۡلَ أَن تَنفَدَ كَلِمَٰتُ رَبِّي ﴾

**"ಹೇಳು: ಒಂದು ವೇಳೆ ಸಾಗರವು ನನ್ನ ಪ್ರಭುವಿನ ಮಾತುಗಳಿಗೆ (ಮಾತುಗಳನ್ನು ಬರೆದಿಡುವುದಕ್ಕೆ) ಶಾಯಿಯಾಗುವುದಾದರೆ ನನ್ನ ಪ್ರಭುವಿನ ಮಾತುಗಳು ಮುಗಿಯುವುದಕ್ಕೆ ಮೊದಲೇ ಸಾಗರವು ಬತ್ತಿಹೋಗುವುದು"** (ಕುರ್‌ಆನ್ 18/109) ಎಂದು ನಾವು ವಿಶ್ವಾಸವಿಡುತ್ತೇವೆ.

﴿ وَلَوۡ أَنَّمَا فِي ٱلۡأَرۡضِ مِن شَجَرَةٍ أَقۡلَٰمٞ وَٱلۡبَحۡرُ يَمُدُّهُۥ مِنۢ بَعۡدِهِۦ سَبۡعَةُ أَبۡحُرٖ
مَّا نَفِدَتۡ كَلِمَٰتُ ٱللَّهِۗ إِنَّ ٱللَّهَ عَزِيزٌ حَكِيمٞ ٢٧ ﴾

**"ಒಂದು ವೇಳೆ ಭೂಮಿಯಲ್ಲಿರುವ ಮರಗಳೆಲ್ಲವೂ ಲೇಖನಿಗಳಾಗಿ, ಸಮುದ್ರವು ಮತ್ತು ಅದರ ನಂತರ ಏಳು ಸಾಗರಗಳು (ಒಂದರ ನಂತರ ಒಂದಾಗಿ ಅದಕ್ಕೆ ಶಾಯಿಯಾಗಿ) ಬೆಂಬಲಿಸುವುದಾದರೆ ಅಲ್ಲಾಹನ ಮಾತುಗಳು ಮುಗಿಯಲಾರವು. ಖಂಡಿತವಾಗಿಯೂ ಅಲ್ಲಾಹು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿದ್ದಾನೆ."** (ಕುರ್‌ಆನ್ 31/27) ಎಂದು ನಾವು ವಿಶ್ವಾಸವಿಡುತ್ತೇವೆ.

ಖಂಡಿತವಾಗಿಯೂ ಅಲ್ಲಾಹನ ವಚನಗಳು, ವಚನಗಳಲ್ಲೇ ಅತ್ಯಂತ ಸಮಗ್ರವೂ,

ತಿಳಿಸಿಕೊಡುವುದರಲ್ಲಿ ಅತ್ಯಂತ ಸತ್ಯಸಂಧವೂ, ತೀರ್ಪುಗಳಲ್ಲಿ ಅತ್ಯಂತ ನ್ಯಾಯಯುತವೂ, ಮಾತುಗಳಲ್ಲಿ ಅತ್ಯಂತ ಸುಂದರವೂ ಆಗಿವೆ ಎಂದು ನಾವು ವಿಶ್ವಾಸವಿಡುತ್ತೇವೆ.

ಅಲ್ಲಾಹು ತಆಲಾ ಹೇಳಿದ್ದಾನೆ:

﴿ وَتَمَّتْ كَلِمَتُ رَبِّكَ صِدْقًا وَعَدْلًا ﴾

**“ಮತ್ತು ನಿನ್ನ ಪ್ರಭುವಿನ ವಚನವು ಸತ್ಯಸಂಧವಾಗಿ ಹಾಗೂ ನ್ಯಾಯಯುತವಾಗಿ ನೆರವೇರಿಸಲ್ಪಟ್ಟಿದೆ.”** (ಕುರ್‌ಆನ್ 6/115)

﴿ وَمَنْ أَصْدَقُ مِنَ اللَّهِ حَدِيثًا ﴿٨٧﴾ ﴾

**“ಮಾತನಾಡುವುದರಲ್ಲಿ ಅಲ್ಲಾಹನಿಗಿಂತಲೂ ಹೆಚ್ಚು ಸತ್ಯಸಂಧನು ಯಾರಿದ್ದಾನೆ?”** (ಕುರ್‌ಆನ್ 4/87)

ಖಂಡಿತವಾಗಿಯೂ ಆದರಣೀಯ ಕುರ್‌ಆನ್ ಎಂಬುದು ಅಲ್ಲಾಹು ಸತ್ಯವಾಗಿಯೂ ಮಾತನಾಡಿದ ಮತ್ತು ಜಿಬ್ರೀಲ್‌ಗೆ ಹಾಕಿಕೊಟ್ಟ, ತರುವಾಯ ಜಿಬ್ರೀಲ್ ಅದರೊಂದಿಗೆ ಪ್ರವಾದಿ(ﷺ)ರವರ ಹೃದಯದಲ್ಲಿ ಇಳಿದ, ಅಲ್ಲಾಹನ ವಚನಗಳಾಗಿವೆ ಎಂದು ನಾವು ವಿಶ್ವಾಸವಿಡುತ್ತೇವೆ.

﴿ قُلْ نَزَّلَهُ رُوحُ الْقُدُسِ مِن رَّبِّكَ بِالْحَقِّ ﴾

**“(ಓ ಪ್ರವಾದಿ!) ಹೇಳು: ಪವಿತ್ರಾತ್ಮನು (ಜಿಬ್ರೀಲ್) ಸತ್ಯದೊಂದಿಗೆ ಅದನ್ನು (ಕುರ್‌ಆನನ್ನು) ನಿನ್ನ ಪ್ರಭುವಿನ ಬಳಿಯಿಂದ ಇಳಿಸಿ ತಂದದ್ದಾಗಿದೆ.”** (ಕುರ್‌ಆನ್ 16/102)

﴿ وَإِنَّهُ لَتَنزِيلُ رَبِّ الْعَالَمِينَ ﴿١٩٢﴾ نَزَلَ بِهِ الرُّوحُ الْأَمِينُ ﴿١٩٣﴾ عَلَىٰ قَلْبِكَ لِتَكُونَ مِنَ الْمُنذِرِينَ ﴿١٩٤﴾ بِلِسَانٍ عَرَبِيٍّ مُّبِينٍ ﴿١٩٥﴾ ﴾

**“ಖಂಡಿತವಾಗಿಯೂ ಅದು (ಕುರ್‌ಆನ್) ಸರ್ವ ಸೃಷ್ಟಿಗಳ ಪ್ರಭುವಾದ ಅಲ್ಲಾಹನಿಂದ ಇಳಿಸಲ್ಪಟ್ಟದ್ದಾಗಿದೆ. ಸುಸ್ಪಷ್ಟವಾದ ಅರಬಿ ಭಾಷೆಯಲ್ಲಿರುವ ಅದರೊಂದಿಗೆ ನಿನ್ನ (ಪ್ರವಾದಿ (ﷺ)ರವರ) ಹೃದಯದ ಮೇಲೆ ಇಳಿದಿರುವುದು ವಿಶ್ವಾಸಾರ್ಹ ಆತ್ಮ (ಜಿಬ್ರೀಲ್)ವಾಗಿದೆ, ನೀನು ಮುನ್ನೆಚ್ಚರಿಕೆ ನೀಡುವವರ ಪೈಕಿ ಸೇರಿದವನಾಗುವ ಸಲುವಾಗಿ.”** (ಕುರ್‌ಆನ್ 26/192–195)

ಖಂಡಿತವಾಗಿಯೂ ಅಲ್ಲಾಹು ತನ್ನ ದಾತ್ (ದೈವಿಕ ಸತ್ವ) ಮತ್ತು ಸಿಫಾತ್ (ವಿಶೇಷಣ) ಗಳೊಂದಿಗೆ ತನ್ನೆಲ್ಲಾ ಸೃಷ್ಟಿಗಳ ಮೇಲಿದ್ದಾನೆ ಎಂದು ನಾವು ವಿಶ್ವಾಸವಿಡುತ್ತೇವೆ. ಯಾಕೆಂದರೆ ಅಲ್ಲಾಹು ಹೇಳಿದ್ದಾನೆ:

﴿ وَهُوَ الْعَلِيُّ الْعَظِيمُ ﴿٢٥٥﴾ ﴾

**“ಅವನು ಅತ್ಯುನ್ನತವಾಗಿರುವವನೂ ಮಹಾನನೂ ಆಗಿದ್ದಾನೆ.”** (ಕುರ್‌ಆನ್ 2/255)

ಮತ್ತು ಅಲ್ಲಾಹು ಹೇಳಿದ್ದಾನೆ:

﴿ وَهُوَ ٱلْقَاهِرُ فَوْقَ عِبَادِهِۦ ۚ وَهُوَ ٱلْحَكِيمُ ٱلْخَبِيرُ ﴿١٨﴾ ﴾

**“ಅವನು ತನ್ನ ಸೃಷ್ಟಿಗಳ ಮೇಲ್ಭಾಗದಲ್ಲಿರುವ ಸರ್ವಾಧಿಕಾರಿಯಾಗಿದ್ದಾನೆ. ಅವನು ಯುಕ್ತಿಪೂರ್ಣನೂ ಸೂಕ್ಷ್ಮಜ್ಞಾನಿಯೂ ಆಗಿದ್ದಾನೆ.”** (ಕುರ್‌ಆನ್ 6/18)

﴿ إِنَّ رَبَّكُمُ ٱللَّهُ ٱلَّذِى خَلَقَ ٱلسَّمَـٰوَٰتِ وَٱلْأَرْضَ فِى سِتَّةِ أَيَّامٍ ثُمَّ ٱسْتَوَىٰ عَلَى ٱلْعَرْشِ ۖ يُدَبِّرُ ٱلْأَمْرَ ۖ ﴾

**“ಆರು ದಿನಗಳಲ್ಲಿ ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದವನು ಯಾರೋ ಖಂಡಿತವಾಗಿಯೂ ಅವನೇ ನಿಮ್ಮ ಪ್ರಭು. ತರುವಾಯ ಕಾರ್ಯಗಳನ್ನು ನಿಯಂತ್ರಿಸುತ್ತಾ ಅವನು ಅರ್ಶ್‌ನ ಮೇಲೆ ಆರೂಢನಾದನು”** (ಕುರ್‌ಆನ್ 10/3) ಎಂದು ನಾವು ವಿಶ್ವಾಸವಿಡುತ್ತೇವೆ.

ಅರ್ಶ್(ಸಿಂಹಾಸನ)ನ ಮೇಲೆ ಆರೂಢನಾಗುವುದು ಎಂದರೆ ಅವನು ತನ್ನ ದಾತ್ (ದೈವಿಕ ಸತ್ವ)ದೊಂದಿಗೆ ಅದರ (ಅರ್ಶ್‌ನ) ಮೇಲಿದ್ದಾನೆ ಎಂದಾಗಿದೆ. ಅದು ಅವನ ಸಾರ್ವಭೌಮತ್ವಕ್ಕೆ ಮತ್ತು ಮಹಾತ್ಮೆಗೆ ಹೊಂದಿಕೆಯಾಗುವಂತಹ ವಿಧದಲ್ಲಿರುವ ವಿಶೇಷ ಆರೂಢನೆಯಾಗಿದೆ. ಅದು ಹೇಗೆ ಎಂಬುದು ಅವನ ಹೊರತು ಯಾರೂ ತಿಳಿದಿಲ್ಲ.[5]

ಖಂಡಿತವಾಗಿಯೂ ಅಲ್ಲಾಹು ತನ್ನ ಸಿಂಹಾಸನದ ಮೇಲಿರುವವನಾಗಿದ್ದುಕೊಂಡೇ ತನ್ನ ಸೃಷ್ಟಿಗಳೊಂದಿಗೂ ಇದ್ದಾನೆ ಎಂದು ನಾವು ವಿಶ್ವಾಸವಿಡುತ್ತೇವೆ.[6] (ಅಂದರೆ) ಅವನು ಅವರ (ಸೃಷ್ಟಿಗಳ) ಸ್ಥಿತಿಗತಿಗಳನ್ನು ಅರಿಯುತ್ತಾನೆ, ಅವರ ಮಾತುಗಳನ್ನು ಆಲಿಸುತ್ತಾನೆ,

---

**5**. ಸಿಂಹಾಸನಾರೂಢನಾಗುವುದು ಹೇಗೆ ಎಂದು ಇಮಾಮ್ ಮಾಲಿಕ್‌ರೊಂದಿಗೆ ವಿಚಾರಿಸಲಾದಾಗ ಅವರು ಹೇಳಿದರು: ‘ಸಿಂಹಾಸನಾರೂಢನಾಗುವುದು ತಿಳಿದಿರುವಂತದ್ದೇ ಆಗಿದೆ. ಆದರೆ ಅದು ಹೇಗೆಂಬುದು ಅಜ್ಞಾತವಾಗಿದೆ. ಅದರಲ್ಲಿ ವಿಶ್ವಾಸವಿಡುವುದು ಕಡ್ಡಾಯವಾಗಿದೆ ಮತ್ತು ಅದರ ಕುರಿತು ಪ್ರಶ್ನಿಸುವುದು ನೂತನವಾದವಾಗಿದೆ.’ ಇದನ್ನು ಬೈಹಕೀ ತನ್ನ ‘ಅಲ್‌ಅಸ್ಮಾಉ ವಸ್ಸಿಫಾತ್’ನಲ್ಲಿ (ಪುಟ 516) ಉದ್ಧರಿಸಿದ್ದಾರೆ. ಇದರ ಸನದ್ ಅತ್ಯುತ್ತಮವಾಗಿದೆಯೆಂದು ಹಾಫಿದ್ ಇಬ್ನ್ ಹಜರ್ ತನ್ನ ‘ಫತ್‌ಹುಲ್ ಬಾರಿ’ಯಲ್ಲಿ (13/406) ಹೇಳಿದ್ದಾರೆ.

**6**. ಇಮಾಮ್ ಮಾಲಿಕ್ ಹೇಳಿದರು: ‘ಅಲ್ಲಾಹು ಆಕಾಶಗಳ ಮೇಲಿದ್ದಾನೆ ಮತ್ತು ಅವನ ಜ್ಞಾನವು ಎಲ್ಲ ಕಡೆಯೂ ಇದೆ. ಅವನಿಂದ ಏನೊಂದೂ ಮರೆಯಾಗಿಲ್ಲ.’ ಇದನ್ನು ಅಬೂದಾವೂದ್ ತನ್ನ ‘ಮಸಾಇಲ್’ನಲ್ಲಿ (ಪುಟ 263) ಉದ್ಧರಿಸಿದ್ದಾರೆ. ಇದರ ಸನದ್ ಸಹೀಹ್ ಆಗಿದೆ.
ಅಬ್ದುಲ್ಲಾಹ್ ಇಬ್ನುಲ್ ಮುಬಾರಕ್‌ರೊಂದಿಗೆ ಕೇಳಲಾಯಿತು: ‘ನಾವು ಅಲ್ಲಾಹನನ್ನು ಅರಿತುಕೊಳ್ಳುವುದು ಹೇಗೆ?’ ಅವರು ಹೇಳಿದರು: ‘ಅವನು ಏಳಾಕಾಶಗಳ ಮೇಲೆ ತನ್ನ ಅರ್ಶ್‌ನ ಮೇಲಿದ್ದಾನೆ. ಅಲ್ಲಾಹು ಇಲ್ಲಿ ಭೂಮಿಯಲ್ಲಿದ್ದಾನೆಂದು ಜಹ್ಮೀಗಳು ಹೇಳುವಂತೆ ನಾವು ಹೇಳುವುದಿಲ್ಲ.’ ಇದನ್ನು ದಾರಿಮೀ ತನ್ನ ‘ಅರ್ರದ್ದ್ ಅಲಲ್ ಜಹ್ಮಿಯ್ಯಃ’ದಲ್ಲಿ (ಪುಟ 50) ಉದ್ಧರಿಸಿದ್ದಾರೆ. ಇದರ ಸನದ್ ಸಹೀಹ್ ಆಗಿದೆ. ನೋಡಿ: ಅಲ್ಬಾನಿಯ ‘ಮುಖ್ತಸರುಲ್ ಉಲುವ್ವ್’ (ಹದೀಸ್ ನಂ. 130 ಮತ್ತು 150)

ಅವರ ಕರ್ಮಗಳನ್ನು ಕಾಣುತ್ತಾನೆ, ಅವರ ಕಾರ್ಯಕಲಾಪಗಳನ್ನು ನಿಯಂತ್ರಿಸುತ್ತಾನೆ, ಬಡವರಿಗೆ ಅನ್ನಾಧಾರ ಒದಗಿಸುತ್ತಾನೆ ಮತ್ತು ಸಂಕಟದಲ್ಲಿರುವವರಿಗೆ ನೆಮ್ಮದಿಯನ್ನು ದಯಪಾಲಿಸುತ್ತಾನೆ. ಅವನಿಚ್ಛಿಸಿದವರಿಗೆ ಅವನು ಆಧಿಪತ್ಯವನ್ನು ನೀಡುತ್ತಾನೆ ಮತ್ತು ಅವನಿಚ್ಛಿಸಿದವರಿಂದ ಅವನದನ್ನು ಕಸಿಯುತ್ತಾನೆ. ಅವನಿಚ್ಛಿಸಿದವರನ್ನು ಅವನು ಗೌರವಿಸುತ್ತಾನೆ ಮತ್ತು ಅವನಿಚ್ಛಿಸಿದವರನ್ನು ಅವನು ನಿಂದ್ಯನಾಗಿಸುತ್ತಾನೆ. ಒಳಿತು ಅವನ ಕೈಯಲ್ಲಿದೆ ಮತ್ತು ಅವನು ಎಲ್ಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿದ್ದಾನೆ. ಯಾರ ವಿಷಯವು ಹೀಗಿರುತ್ತದೋ ಅವನು ಸತ್ಯವಾಗಿಯೂ ತನ್ನ ಸೃಷ್ಟಿಗಳೊಂದಿಗಿದ್ದಾನೆ ವಾಸ್ತವಿಕವಾಗಿ ಅವನು ಸೃಷ್ಟಿಗಳ ಮೇಲೆ ಸಿಂಹಾಸನ (ಅರ್ಶ್)ದಲ್ಲಿರುವವನಾಗಿದ್ದರೂ ಕೂಡ.[7]

﴿ لَيْسَ كَمِثْلِهِۦ شَىْءٌ ۖ وَهُوَ ٱلسَّمِيعُ ٱلْبَصِيرُ ﴾ (١١)

**“ಅವನಿಗೆ ಹೋಲಿಕೆಯಾಗಿ ಏನೊಂದೂ ಇಲ್ಲ. ಅವನು ಎಲ್ಲವನ್ನೂ ಆಲಿಸುವವನೂ**

7. ‘ಯಾರ ವಿಷಯವು ಹೀಗಿರುತ್ತದೋ ಅವನು ಸತ್ಯವಾಗಿಯೂ ತನ್ನ ಸೃಷ್ಟಿಗಳೊಂದಿಗಿದ್ದಾನೆ ವಾಸ್ತವಿಕವಾಗಿ ಅವನು ಸೃಷ್ಟಿಗಳ ಮೇಲೆ ಸಿಂಹಾಸನ (ಅರ್ಶ್)ದಲ್ಲಿರುವವನಾಗಿದ್ದರೂ ಕೂಡ’ ಎಂಬ ಶೈಖ್ ಉಸೈಮೀನ್‌ರವರ ಮಾತಿನ ತಾತ್ಪರ್ಯದ ಕುರಿತು ಅವರು ತನ್ನ ‘ಮಜ್ಮೂಉಲ್ ಫತಾವಾ ವರ್ರಸಾಇಲ್’ನಲ್ಲಿ (1/134) ಹೀಗೆನ್ನುತ್ತಾರೆ: ‘ಇದರಿಂದ ನಾವು ಉದ್ದೇಶಿಸುವುದೇನೆಂದರೆ ಈ ಆಯತ್ (ನೀವೆಲ್ಲೇ ಇದ್ದರೂ ಅಲ್ಲಾಹು ನಿಮ್ಮ ಜೊತೆಗಿದ್ದಾನೆ ಎಂಬ ಕುರ್‌ಆನ್ 57/4ರ ಆಯತ್) ಮತ್ತು ಇದರಂತಿರುವ ಅಲ್ಲಾಹನ ವಿಶೇಷಣಗಳನ್ನು ವಿವರಿಸುವ ಆಯತ್‌ಗಳಿಂದ ಅವುಗಳ ನೈಜ ಅರ್ಥವನ್ನೇ ಉದ್ದೇಶಿಸಬೇಕಾಗಿದೆ. ಆದರೆ ಅದರೊಂದಿಗೆ ಅಲ್ಲಾಹು ಸೃಷ್ಟಿಗಳ ಜೊತೆಗೆ ಬೆರೆತಿದ್ದಾನೆ ಎಂಬ ಅಲ್ಲಾಹನಿಗೆ ಹೊಂದಿಕೆಯಾಗದ ವಿಶೇಷಣಗಳಿಂದ ಅವನನ್ನು ಪರಿಶುದ್ಧಗೊಳಿಸಬೇಕಾಗಿದೆ. ವಾಸ್ತವಿಕವಾಗಿ ಅಲ್ಲಾಹು ಅರ್ಶ್‌ನ ಮೇಲೆ ತನ್ನ ಸೃಷ್ಟಿಗಳಿಂದ ಸ್ಪಷ್ಟವಾಗಿ ಬೇರ್ಪಟ್ಟು ನಿಂತಿದ್ದಾನೆ. ಇಲ್ಲಿ ಅಲ್ಲಾಹು ನಿಮ್ಮ ಜೊತೆಗಿದ್ದಾನೆ ಎಂಬುದು ಅಲ್ಲಾಹು ನಿಮ್ಮೊಂದಿಗೆ ಬೆರೆತಿದ್ದಾನೆ ಎಂಬುದನ್ನು ಅನಿವಾರ್ಯಗೊಳಿಸುವುದಿಲ್ಲ. ಉದಾಹರಣೆಗೆ ಅರಬರು ಹೇಳುತ್ತಾರೆ: ‘ಮಾ ಝಿಲ್‌ನಾ ನಸೀರು ವಲ್ ಕಮರು ಮಅನಾ’ (ಚಂದ್ರ ನಮ್ಮ ಜೊತೆಗಿರುವ ತನಕ ನಾವು ಪ್ರಯಾಣ ಮಾಡುತ್ತಲೇ ಇದ್ದೆವು). ಆದರೆ ವಾಸ್ತವಿಕವಾಗಿ ಚಂದ್ರ ಆಕಾಶದಲ್ಲಿದೆ. ಅರಬರ ಈ ಮಾತಿನಿಂದ ಚಂದ್ರ ಭೂಮಿಯಲ್ಲಿ (ಅವರ ಜೊತೆಗೆ ಪ್ರಯಾಣ ಮಾಡುತ್ತಿ)ದೆ ಎಂದು ಯಾರೂ ಗ್ರಹಿಸುವುದಿಲ್ಲ. ಅದೇ ರೀತಿ ಅಲ್ಲಾಹು ಕೂಡ ತನ್ನ ಸೃಷ್ಟಿಯೊಂದಿಗೇ ಇದ್ದಾನೆ. ಇದನ್ನು ದೃಢೀಕರಿಸುತ್ತಾ ಶೈಖುಲ್ ಇಸ್ಲಾಮ್ ಇಬ್ನ್ ತೈಮಿಯ್ಯಃ ತನ್ನ ಅಲ್‌ಅಕೀದತುಲ್ ವಾಸಿತಿಯ್ಯಃದಲ್ಲಿ ಹೇಳಿದ್ದಾರೆ: ‘ಅಲ್ಲಾಹು ಅರ್ಶ್‌ನ ಮೇಲಿದ್ದಾನೆ ಮತ್ತು ನಿಮ್ಮ ಜೊತೆಗೂ ಇದ್ದಾನೆ ಎಂಬ ಅಲ್ಲಾಹು ಪ್ರಸ್ತಾಪಿಸುವ ಈ ಮಾತುಗಳೆಲ್ಲವೂ ಅದರ ನೈಜ ಅರ್ಥದಲ್ಲೇ ಸತ್ಯವಾಗಿದೆ. ಅದನ್ನು ದುರ್ವ್ಯಾಖ್ಯಾನ ಮಾಡಬೇಕಾದ ಅಗತ್ಯ ಬರುವುದಿಲ್ಲ.’ ಇದಕ್ಕಿಂತ ಮುಂಚೆ ಅವರು (ಶೈಖುಲ್ ಇಸ್ಲಾಮ್) ಹೇಳಿದ್ದಾರೆ: ‘ಅಲ್ಲಾಹು ನಿಮ್ಮೊಂದಿಗಿದ್ದಾನೆ ಎಂಬ ಅಲ್ಲಾಹನ ವಚನದ ಅರ್ಥ ಅವನು ಸೃಷ್ಟಿಗಳೊಂದಿಗೆ ಬೆರೆತಿದ್ದಾನೆ ಎಂದಲ್ಲ. ಈ ರೀತಿ ಅರ್ಥ ನೀಡುವುದನ್ನು ಭಾಷೆ ಕೂಡ ಕಡ್ಡಾಯಗೊಳಿಸುವುದಿಲ್ಲ. ಉದಾಹರಣೆಗೆ ಚಂದ್ರ ಅಲ್ಲಾಹನ ದೃಷ್ಟಾಂತಗಳಲ್ಲಿ ಸೇರಿದ ಒಂದು ದೃಷ್ಟಾಂತವಾಗಿದೆ ಮತ್ತು ಅವನ ಸೃಷ್ಟಿಗಳ ಪೈಕಿ ಒಂದು ಪುಟ್ಟ ಸೃಷ್ಟಿಯಾಗಿದೆ. ಅದು ಆಕಾಶದಲ್ಲಿದ್ದು ಕೂಡ ಪ್ರಯಾಣ ಮಾಡುವವನೊಂದಿಗೂ, ಪ್ರಯಾಣ ಮಾಡದವನೊಂದಿಗೂ ಅವರು ಎಲ್ಲೇ ಇದ್ದರೂ ಅವರ ಜೊತೆಗಿರುತ್ತದೆ.’ (ಶೈಖುಲ್ ಇಸ್ಲಾಮ್‌ರವರ) ಈ ದೃಢೀಕರಣದಿಂದ ತಿಳಿದುಬರುವ ಪ್ರಕಾರ ಅಲ್ಲಾಹು ಸತ್ಯವಾಗಿಯೂ ತನ್ನ ಸೃಷ್ಟಿಗಳೊಂದಿಗಿದ್ದಾನೆ. ವಾಸ್ತವಿಕವಾಗಿ ಅವನು ತನ್ನ ದಾತ್ (ದೈವಿಕ ಸತ್ವ)ದೊಂದಿಗೆ ಅರ್ಶ್‌ನ ಮೇಲಿದ್ದರೂ ಕೂಡ. ಆದ್ದರಿಂದ ಈ ಎರಡು ಮಾತುಗಳು ಪರಸ್ಪರ ವಿರೋಧಾಭಾಸ ಸೂಚಿಸುವುದಿಲ್ಲ.’

**ಎಲ್ಲವನ್ನೂ ಕಾಣುವವನೂ ಆಗಿದ್ದಾನೆ."** (ಕುರ್‌ಆನ್ 42/11)

'ಜಹ್ಮಿಯ್ಯಃ' ಮತ್ತಿತರ ಪಂಗಡಗಳಲ್ಲಿ ಸೇರಿದ ಹುಲೂಲಿಯ್ಯಃ (ಅದ್ವೈತವಾದಿಗಳು) ಹೇಳುವಂತೆ ಅಲ್ಲಾಹು ತನ್ನ ಸೃಷ್ಟಿಯೊಂದಿಗೆ ಭೂಮಿಯಲ್ಲಿದ್ದಾನೆ ಎಂದು ನಾವು ಹೇಳುವುದಿಲ್ಲ.

ಈ ರೀತಿ ಹೇಳುವವನು ಅವಿಶ್ವಾಸಿಯಾಗಿದ್ದಾನೆ ಅಥವಾ ದಾರಿಗೆಟ್ಟವನಾಗಿದ್ದಾನೆ ಎಂದಾಗಿದೆ ನಮ್ಮ ದೃಷ್ಟಿಕೋನ. ಯಾಕೆಂದರೆ ಅಲ್ಲಾಹನಿಗೆ ಹೊಂದಿಕೆಯಾಗದ ನ್ಯೂನತೆಗಳಿಂದ ಕೂಡಿದ ವಿಶೇಷಣದೊಂದಿಗೆ ಅವನು ಅಲ್ಲಾಹನನ್ನು ವಿವರಿಸಿದ್ದಾನೆ.[8]

ಅಲ್ಲಾಹು ಪ್ರತಿ ರಾತ್ರಿಯೂ, ಅದರ ಮೂರನೇ ಒಂದು ಹಂತವು ಉಳಿದಿರುವಾಗ, ಭೂಮಿಗೆ ಅತಿ ಸಮೀಪದ ಆಕಾಶಕ್ಕೆ ಇಳಿದು ಬಂದು:

«مَنْ يَدْعُونِي فَأَسْتَجِيبَ لَهُ ؛ مَنْ يَسْأَلُنِي فَأُعْطِيَهُ ؛ مَنْ يَسْتَغْفِرُنِي فَأَغْفِرَ لَهُ»

**"ಯಾರು ನನ್ನೊಂದಿಗೆ ಪ್ರಾರ್ಥಿಸುತ್ತಾನೋ ಅವನಿಗೆ ನಾನು ಉತ್ತರ ನೀಡುವೆನು; ಯಾರು ನನ್ನೊಂದಿಗೆ ಬೇಡುತ್ತಾನೋ ಅವನಿಗೆ ನಾನು ಕರುಣಿಸುವೆನು; ಯಾರು ನನ್ನೊಂದಿಗೆ ಪಾಪಮುಕ್ತಿಯನ್ನು ಬೇಡುವನೋ ಅವನಿಗೆ ನಾನು ಪಾಪಮುಕ್ತಿ ನೀಡುವೆನು."** ಎಂದು ಹೇಳುತ್ತಾನೆಂದು ಅವನ ಕುರಿತು ಅವನ ಸಂದೇಶವಾಹಕ(ﷺ)ರವರು ತಿಳಿಸಿಕೊಟ್ಟಿರುವುದರಲ್ಲಿ ನಾವು ವಿಶ್ವಾಸವಿಡುತ್ತೇವೆ.[9]

ಅಲ್ಲಾಹು ಮರಳುವಿಕೆಯ ದಿನದಂದು (ಅಂತ್ಯದಿನದಂದು) ತನ್ನ ಸೃಷ್ಟಿಗಳ ನಡುವೆ ತೀರ್ಪು ನೀಡುವ ಸಲುವಾಗಿ ಬರುವನೆಂದು ನಾವು ವಿಶ್ವಾಸವಿಡುತ್ತೇವೆ. ಯಾಕೆಂದರೆ ಅಲ್ಲಾಹು ಹೇಳಿದ್ದಾನೆ:

﴿ كَلَّآ إِذَا دُكَّتِ ٱلْأَرْضُ دَكًّا دَكًّا ﴿٢١﴾ وَجَآءَ رَبُّكَ وَٱلْمَلَكُ صَفًّا صَفًّا ﴿٢٢﴾ وَجِاْىٓءَ
يَوْمَئِذٍۭ بِجَهَنَّمَ ۚ يَوْمَئِذٍ يَتَذَكَّرُ ٱلْإِنسَـٰنُ وَأَنَّىٰ لَهُ ٱلذِّكْرَىٰ ﴿٢٣﴾ ﴾

**"ಅದಲ್ಲ, ಭೂಮಿಯು ಜಜ್ಜಿ ಸಮತಲಗೊಳಿಸಲ್ಪಟ್ಟಾಗ. ಮತ್ತು ನಿನ್ನ ಪ್ರಭು ಬರುವನು ಮತ್ತು ಮಲಕ್‌ಗಳು ಸಾಲು ಸಾಲಾಗಿ (ಬರುವರು). ಅಂದು ನರಕವನ್ನು ಸಮೀಪಕ್ಕೆ ತರಲಾಗುವುದು. ಅಂದು ಮನುಷ್ಯನು ಸ್ಮರಿಸುವನು. ಆದರೆ ಆ ಸ್ಮರಣೆಯು ಅವನಿಗೆ ಹೇಗೆ**

---

**8**. ಶೈಖ್ ಉಸೈಮೀನ್‌ರವರು ತನ್ನ 'ಮಜ್ಮೂಉಲ್ ಫತಾವಾ ವರ್‍ರಸಾಇಲ್'ನಲ್ಲಿ (1/133) ಹೇಳಿದ್ದಾರೆ: 'ಅಲ್ಲಾಹು ಎಲ್ಲ ಕಡೆ ಇದ್ದಾನೆ ಎಂದು ಹೇಳುವವನು ಆ ರೀತಿ ಹೇಳುವುದು ಅಲ್ಲಾಹು ತನ್ನ ದಾತ್(ದೈವಿಕ ಸತ್ವ)ದೊಂದಿಗೆ ಎಲ್ಲ ಕಡೆ ಇದ್ದಾನೆ ಎಂದಾಗಿದ್ದರೆ ಅದು ಕುಫ್ರ್ ಆಗಿದೆ. ಯಾಕೆಂದರೆ ಅದು ಅಲ್ಲಾಹು ತನ್ನ ಸೃಷ್ಟಿಗಳೆಲ್ಲದರ ಮೇಲೆ ಔನ್ನತ್ಯದಲ್ಲಿದ್ದಾನೆ, ಆಕಾಶಗಳ ಮೇಲಿದ್ದಾನೆ ಮತ್ತು ತನ್ನ ಅರ್ಶ್‌ನ ಮೇಲಿದ್ದಾನೆ ಎಂಬ ಕುರ್‌ಆನ್ ಮತ್ತು ಸುನ್ನತ್‌ನ ನಸ್ಸ್ (ಸ್ಪಷ್ಟ ವಚನ)ಗಳನ್ನು, ಬೌದ್ಧಿಕ ಮತ್ತು ನೈಸರ್ಗಿಕ ಪುರಾವೆಗಳನ್ನು ನಿರಾಕರಿಸುವುದಾಗಿದೆ.'

**9**. ಇದನ್ನು ಬುಖಾರಿ ತನ್ನ 'ಸಹೀಹ್'ನಲ್ಲಿ (1/384; ಹದೀಸ್ ನಂ. 1094) ಮತ್ತು ಮುಸ್ಲಿಮ್ ತನ್ನ 'ಸಹೀಹ್'ನಲ್ಲಿ (1/521; ಹದೀಸ್ ನಂ. 758) ವರದಿ ಮಾಡಿದ್ದಾರೆ.

**ಪ್ರಯೋಜನವನ್ನು ನೀಡೀತು?"** (ಕುರ್‌ಆನ್ 89/21–23)

﴿ فَعَّالٌ لِّمَا يُرِيدُ ﴿١٠٧﴾ ﴾

**"(ಅಲ್ಲಾಹು) ಅವನಿಚ್ಛಿಸಿದ್ದೆಲ್ಲವನ್ನೂ ಮಾಡುತ್ತಾನೆ."** (ಕುರ್‌ಆನ್ 11/107) ಎಂದು ನಾವು ವಿಶ್ವಾಸವಿಡುತ್ತೇವೆ.

ಅಲ್ಲಾಹನ ಇಚ್ಛೆಯು ಎರಡು ವಿಧವಾಗಿವೆ ಎಂದು ನಾವು ವಿಶ್ವಾಸವಿಡುತ್ತೇವೆ.

**ಒಂದು: ನೈಸರ್ಗಿಕ (ಕೌನಿಯ್ಯಃ) ಇಚ್ಛೆ:** ಇದರೊಂದಿಗೆ ಅವನ ಇಚ್ಛೆಯು ಸಂಭವಿಸುತ್ತದೆ. ಆದರೆ ಅದು (ಆ ಇಚ್ಛೆ) ಅವನಿಗೆ ಇಷ್ಟಕರವಾಗಿದೆ ಎಂಬುದು ಅನಿವಾರ್ಯವಾಗುವುದಿಲ್ಲ. ಇದು 'ಇಚ್ಛಾಶಕ್ತಿ' (ಮಶೀಅಃ) ಎಂಬ ಅರ್ಥದಲ್ಲಿರುವ ಇಚ್ಛೆಯಾಗಿದೆ. ಉದಾಹರಣೆಗೆ ಅಲ್ಲಾಹು ಹೇಳಿರುವಂತೆ:

﴿ وَلَوْ شَآءَ ٱللَّهُ مَا ٱقْتَتَلُوا۟ وَلَٰكِنَّ ٱللَّهَ يَفْعَلُ مَا يُرِيدُ ﴿٢٥٣﴾ ﴾

**"ಅಲ್ಲಾಹು ಇಚ್ಛಿಸುತ್ತಿದ್ದರೆ ಅವರು ಪರಸ್ಪರ ಹೋರಾಡುತ್ತಿರಲಿಲ್ಲ. ಆದರೆ ಅಲ್ಲಾಹು ಅವನಿಚ್ಛಿಸುವುದನ್ನು ಮಾಡುತ್ತಾನೆ."** (ಕುರ್‌ಆನ್ 2/253)

﴿ إِن كَانَ ٱللَّهُ يُرِيدُ أَن يُغْوِيَكُمْ ۚ هُوَ رَبُّكُمْ ﴾

**"ಅಲ್ಲಾಹು ನಿಮ್ಮನ್ನು ದುರ್ಮಾರ್ಗಿಗಳನ್ನಾಗಿ ಮಾಡಲು ಇಚ್ಛಿಸುವುದಾದರೆ, ಅವನು ನಿಮ್ಮ ಪ್ರಭುವಾಗಿದ್ದಾನೆ."** (ಕುರ್‌ಆನ್ 11/34)[10]

---

**10**. ಇಮಾಮ್ ಅಸ್ಸಲ್‌ದೀರವರ 'ತನ್ಬೀಹಾತುಲ್ಲತೀಫಃ' ಎಂಬ ಗ್ರಂಥಕ್ಕೆ ಬರೆದ ಟಿಪ್ಪಣಿಯಲ್ಲಿ (ಪುಟ 41) ಶೈಖ್ ಇಬ್ನ್ ಬಾಝ್ ಹೇಳಿದ್ದಾರೆ: 'ಈ ಇಚ್ಛೆಯ ಕುರಿತು ಹೇಳುವುದಾದರೆ ಏನೊಂದೂ ಇದರಿಂದ ಹೊರತಾಗಿಲ್ಲ. ಮುಸ್ಲಿಮ್ ಮತ್ತು ಮುಸ್ಲಿಮೇತರರೆಲ್ಲರೂ ಈ ನೈಸರ್ಗಿಕ ಇಚ್ಛೆಯಲ್ಲಿ ಸಮಾನರಾಗಿದ್ದಾರೆ. ವಿಧೇಯತೆಯ ಕರ್ಮಗಳು, ಅವಿಧೇಯತೆಯ ಕರ್ಮಗಳು, ಅನ್ನಾಧಾರ ಮತ್ತು ಆಯುಷ್ಯ ಎಲ್ಲವೂ ಸಂಭವಿಸುವುದು ಅಲ್ಲಾಹನ ಇಚ್ಛೆಯ ಪ್ರಕಾರ ಅಂದರೆ ಅವನ ನೈಸರ್ಗಿಕ ಇಚ್ಛೆಯ ಪ್ರಕಾರವಾಗಿದೆ.'

ನೈಸರ್ಗಿಕವಾದ ಇಚ್ಛೆಯ ಕುರಿತು ಹೇಳುವುದಾದರೆ ಈ ಜಗತ್ತಿನಲ್ಲಿ ಏನೆಲ್ಲ ಸಂಭವಿಸುತ್ತದೋ ಅವೆಲ್ಲವೂ ಅಲ್ಲಾಹನ ಇಚ್ಛೆಯಿಂದಲೇ ಸಂಭವಿಸುತ್ತವೆ. ಅವುಗಳಲ್ಲಿ ಅಲ್ಲಾಹು ಇಷ್ಟಪಡುವಂತಹವುಗಳೂ ಇಷ್ಟಪಡದಂತಹವುಗಳೂ ಇವೆ. ಇದನ್ನು ನೈಸರ್ಗಿಕ ಇಚ್ಛೆ ಎನ್ನಲಾಗುತ್ತದೆ. ಆದ್ದರಿಂದ ನೈಸರ್ಗಿಕ ಇಚ್ಛೆಗಳೆಲ್ಲವೂ ಅಲ್ಲಾಹನಿಗೆ ಇಷ್ಟಕರವಾಗಿವೆ ಮತ್ತು ಅವನ ತೃಪ್ತಿಯೊಂದಿಗೆ ಸಂಭವಿಸುತ್ತವೆ ಎಂದು ಹೇಳಲಾಗುವುದಿಲ್ಲ. ಉದಾಹರಣೆಗೆ ಅಲ್ಲಾಹನ ಆರಾಧನೆ ಮತ್ತು ಅಲ್ಲಾಹೇತರರ ಆರಾಧನೆ ಎರಡೂ ನೈಸರ್ಗಿಕ ಇಚ್ಛೆಗಳಾಗಿವೆ. ಅಲ್ಲಾಹನ ಆರಾಧನೆಯನ್ನು ಅವನು ಇಷ್ಟಪಡುತ್ತಾನೆ ಮತ್ತು ಅಲ್ಲಾಹೇತರರ ಆರಾಧನೆಯನ್ನು ಅವನು ಇಷ್ಟಪಡುವುದಿಲ್ಲ. ಆದರೂ ಇವೆರಡೂ ಅವನ ನೈಸರ್ಗಿಕ ಇಚ್ಛೆಯಿಂದಾಗಿ ಸಂಭವಿಸುತ್ತದೆ. ಆದ್ದರಿಂದ ಅಲ್ಲಾಹನ ಆರಾಧನೆ ಮಾಡುವವರೂ ಅಲ್ಲಾಹೇತರರ ಆರಾಧನೆ ಮಾಡುವವರೂ ಈ ಇಚ್ಛೆಯಲ್ಲಿ ಸಮಾನರಾಗಿದ್ದಾರೆ. ಅದೇ ರೀತಿ ಮೇಲಿನ ವಚನಗಳಲ್ಲಿ ಹೇಳಲಾದಂತೆ ಜನರು ಪರಸ್ಪರ ಕಾದಾಡುವುದನ್ನು ಅವನು ಇಷ್ಟಪಡುವುದಿಲ್ಲ. ಆದರೂ ಜನರು ಪರಸ್ಪರ ಕಾದಾಡುವುದು ಅವನ ನೈಸರ್ಗಿಕ ಇಚ್ಛೆಯಿಂದಾಗಿ ಸಂಭವಿಸುತ್ತದೆ. ಹಾಗೆಯೇ ಜನರು ದುರ್ಮಾರ್ಗಿಗಳಾಗುವುದನ್ನು ಅವನು ಇಷ್ಟಪಡುವುದಿಲ್ಲವಾದರೂ ಜನರು ದುರ್ಮಾರ್ಗಿಗಳಾಗುವುದು ಅವನ ನೈಸರ್ಗಿಕ ಇಚ್ಛೆಯಿಂದಾಗಿ ಸಂಭವಿಸುತ್ತದೆ.

**ಎರಡು: ಧರ್ಮನಿರ್ದೇಶಿತ (ಶರ್‌ಇಯ್ಯಃ) ಇಚ್ಛೆ:** ಅವನ ಇಚ್ಛೆ ಸಂಭವಿಸುವುದು ಇದರಿಂದ ಅನಿವಾರ್ಯವಾಗುವುದಿಲ್ಲ ಮತ್ತು ಇದರಲ್ಲಿರುವ ಇಚ್ಛೆಯು ಅವನಿಗೆ ಇಷ್ಟಕರವಾಗಿ ಹೊರತು ಸಂಭವಿಸುವುದಿಲ್ಲ. ಉದಾಹರಣೆಗೆ ಅಲ್ಲಾಹು ಹೇಳಿರುವಂತೆ:

﴿ وَٱللَّهُ يُرِيدُ أَن يَتُوبَ عَلَيْكُمْ ﴾

**"ಅಲ್ಲಾಹು ನಿಮ್ಮನ್ನು ಕ್ಷಮಿಸಲು ಇಚ್ಛಿಸುತ್ತಾನೆ."** (ಕುರ್‌ಆನ್ 4/27)[11]

ನೈಸರ್ಗಿಕವಾದ ಮತ್ತು ಧರ್ಮನಿರ್ದೇಶಿತವಾದ ಎರಡೂ ಇಚ್ಛೆಗಳು ಕೂಡ ಅಲ್ಲಾಹನ ದೈವಿಕ ಯುಕ್ತಿ (ಹಿಕ್ಮತ್)ಗೆ ಅನುಸಾರವಾಗಿ ಸಂಭವಿಸುತ್ತವೆ ಎಂದು ನಾವು ವಿಶ್ವಾಸವಿಡುತ್ತೇವೆ. ಆದ್ದರಿಂದ ನೈಸರ್ಗಿಕವಾಗಿ ಏನೆಲ್ಲಾ ಸಂಭವಿಸಬೇಕೆಂದು ಅವನು ವಿಧಿಸುತ್ತಾನೋ, ಅಥವಾ ಧರ್ಮನಿರ್ದೇಶಿತವಾಗಿ ಅವನ ಸೃಷ್ಟಿಗಳು ಏನನ್ನು ಆರಾಧನಾ ಕರ್ಮವಾಗಿ ನಿರ್ವಹಿಸುತ್ತಾರೋ ಅವೆಲ್ಲವೂ ಅವನ ಯುಕ್ತಿಪೂರ್ಣ ಉದ್ದೇಶಕ್ಕಾಗಿದೆ ಮತ್ತು ಅವನ ದೈವಿಕ ಯುಕ್ತಿಗೆ ಅನುಸಾರವಾಗಿ ಸಂಭವಿಸುತ್ತವೆ. ನಾವದನ್ನು ಅರಿತರೂ

---

**11**. ಇಮಾಮ್ ಅಸ್ಸಅ್‌ದೀರವರ 'ತನ್ಬೀಹಾತುಲ್ಲತೀಫಃ' ಎಂಬ ಗ್ರಂಥಕ್ಕೆ ಬರೆದ ಟಿಪ್ಪಣಿಯಲ್ಲಿ (ಪುಟ 41) ಈ ಶರಈ ಆದ ಇಚ್ಛೆಯ ಕುರಿತು ಶೈಖ್ ಇಬ್ನ್ ಬಾಝ್ ಹೀಗೆಂದಿದ್ದಾರೆ: 'ಅಲ್ಲಾಹು ಪ್ರೀತಿಸುವ ಮತ್ತು ತೃಪ್ತಿಪಡುವ ವಿಷಯಗಳನ್ನು ಈ ಇಚ್ಛೆ ಒಳಗೊಂಡಿದೆ. ಅಲ್ಲಾಹು ಏನು ಇಚ್ಛಿಸುತ್ತಾನೋ ಅದು ಸಂಭವಿಸಬೇಕು ಎಂಬುದನ್ನು ಈ ಇಚ್ಛೆಯು ಅನಿವಾರ್ಯವಾಗಿಸುವುದಿಲ್ಲ. ಕೆಲವೊಮ್ಮೆ ಅದು ಸಂಭವಿಸಬಹುದು ಮತ್ತು ಕೆಲವೊಮ್ಮೆ ಅದು ಸಂಭವಿಸದಿರಲೂಬಹುದು. ಉದಾಹರಣೆಗೆ: ತನ್ನ ಸೃಷ್ಟಿಗಳು ತನ್ನನ್ನು ಆರಾಧಿಸಬೇಕು ಮತ್ತು ತನಗೆ ವಿಧೇಯರಾಗಿರಬೇಕೆಂಬುದು ಅಲ್ಲಾಹನ ಧರ್ಮನಿರ್ದೇಶಿತ ಇಚ್ಛೆಯಾಗಿದೆ. ಆದರೆ ಜನರಲ್ಲಿ ಕೆಲವರು ಅವನನ್ನು ಆರಾಧಿಸುತ್ತಾರೆ ಮತ್ತು ಅವನಿಗೆ ವಿಧೇಯರಾಗಿರುತ್ತಾರೆ. ಇತರ ಕೆಲವರು ಹಾಗೆ ಮಾಡುವುದಿಲ್ಲ. ಆದ್ದರಿಂದ ಅಲ್ಲಾಹನನ್ನು ಆರಾಧಿಸುವ ಮತ್ತು ಅವನಿಗೆ ವಿಧೇಯವಾಗಿರುವ ವ್ಯಕ್ತಿಯಲ್ಲಿ ಈ ಎರಡು ಇಚ್ಛೆಗಳೂ ಸಮನ್ವಯವಾಗುತ್ತವೆ ಎಂದು ಇದರಿಂದ ತಿಳಿಯಬಹುದು. ಆದರೆ ಪಾಪಿಯ ಮೇಲೆ ಕೇವಲ ನೈಸರ್ಗಿಕ ಇಚ್ಛೆ ಮಾತ್ರ ಸಂಭವಿಸುತ್ತದೆ. ಯಾಕೆಂದರೆ ಅವನು ಪಾಪ ಮಾಡಬೇಕೆಂಬುದು ಅಲ್ಲಾಹನ ಧರ್ಮನಿರ್ದೇಶಿತ ಇಚ್ಛೆಯಲ್ಲ. ವಸ್ತುತಃ ಅಲ್ಲಾಹು ಅದನ್ನು ಅವನಿಗೆ ವಿರೋಧಿಸಿದ್ದಾನೆ... ಈ ಎರಡು ಇಚ್ಛೆಗಳನ್ನು ಬೇರ್ಪಡಿಸಿ ತಿಳಿಯಲು ಸಾಧ್ಯವಾದವನು ಅನೇಕ ಮಂದಿಯ ಕಾಲುಗಳನ್ನು ಜಾರಿಸಿದ ಮತ್ತು ಬುದ್ಧಿಗಳನ್ನು ದಾರಿಗೆಡಿಸಿದ ಸಂದೇಹಗಳಿಂದ ತನ್ನನ್ನು ಸುರಕ್ಷಿತನಾಗಿಸಿದನು.'

ಧರ್ಮನಿರ್ದೇಶಿತವಾದ ಇಚ್ಛೆಯ ಕುರಿತು ಹೇಳುವುದಾದರೆ ಇದು ಸಂಭವಿಸುವುದನ್ನು ಅಲ್ಲಾಹು ಇಷ್ಟಪಡುತ್ತಾನೆ. ಯಾಕೆಂದರೆ ಇದು ಅಲ್ಲಾಹು ಇಷ್ಟಪಡುವ ವಿಷಯವನ್ನು ಹೊಂದಿರುವ ಇಚ್ಛೆಯಾಗಿದೆ. ಆದರೆ ಅದು ಸಂಭವಿಸಬಹುದು ಅಥವಾ ಸಂಭವಿಸದಿರಲೂಬಹುದು. ಉದಾಹರಣೆಗೆ ಅಲ್ಲಾಹನ ಆರಾಧನೆಯನ್ನು ಅವನು ಇಷ್ಟಪಡುತ್ತಾನೆ. ಆದರೆ ಜಗತ್ತಿನಲ್ಲಿರುವವರೆಲ್ಲರ ಮೇಲೂ, ಎಲ್ಲ ಕಡೆಯೂ ಅಲ್ಲಾಹನ ಈ ಇಚ್ಛೆ ಸಂಭವಿಸುವುದಿಲ್ಲ. ಅಲ್ಲಾಹೇತರರ ಆರಾಧನೆಯು ಜಗತ್ತಿನಲ್ಲಿರುವವರೆಲ್ಲರ ಮೇಲೂ, ಎಲ್ಲ ಕಡೆಯೂ ಸಂಭವಿಸುವುದಿಲ್ಲವಾದರೂ ಅದು ಅವನು ಇಷ್ಟಪಡದ ಮತ್ತು ವಿರೋಧಿಸಿದ ವಿಷಯವಾಗಿರುವುದರಿಂದ ಅದು ಈ ಇಚ್ಛೆಯಲ್ಲಿ ಸೇರುವುದಿಲ್ಲ. ಆದ್ದರಿಂದ ಅಲ್ಲಾಹನ ಆರಾಧನೆ ಮಾಡುವ ವ್ಯಕ್ತಿಯ ಮೇಲೆ ನೈಸರ್ಗಿಕವಾದ ಮತ್ತು ಧರ್ಮನಿರ್ದೇಶಿತವಾದ ಎರಡು ಇಚ್ಛೆಗಳೂ ಸಂಭವಿಸುತ್ತವೆ. ಆದರೆ ಅಲ್ಲಾಹೇತರರ ಆರಾಧನೆ ಮಾಡುವ ವ್ಯಕ್ತಿಯ ಮೇಲೆ ನೈಸರ್ಗಿಕ ಇಚ್ಛೆ ಮಾತ್ರ ಸಂಭವಿಸುತ್ತದೆ. ಅದೇ ರೀತಿ ಮೇಲಿನ ಆಯತ್ತಿನಲ್ಲಿ ಹೇಳಲಾದಂತೆ ಕ್ಷಮಿಸುವುದನ್ನು ಅಲ್ಲಾಹು ಇಷ್ಟಪಡುತ್ತಾನೆ. ಆದರೆ ಅವನ ಈ ಇಚ್ಛೆ ಎಲ್ಲರಲ್ಲಿಯೂ, ಎಲ್ಲ ಕಡೆಯೂ ಸಂಭವಿಸುವುದಿಲ್ಲವಾದ್ದರಿಂದ ಅದು ಧರ್ಮನಿರ್ದೇಶಿತ ಇಚ್ಛೆಯಲ್ಲಿ ಸೇರುತ್ತದೆ.

ಅರಿಯದೆ ಹೋದರೂ ಕೂಡ. ಅಥವಾ ಅದನ್ನು ಗ್ರಹಿಸುವುದರಲ್ಲಿ ನಮ್ಮ ಬುದ್ಧಿಶಕ್ತಿ ಕುಂಠಿತವಾದರೂ ಕೂಡ.

﴿ أَلَيْسَ ٱللَّهُ بِأَحْكَمِ ٱلْحَٰكِمِينَ ﴿٨﴾ ﴾

**"ತೀರ್ಪು ನೀಡುವವರಲ್ಲಿ ಅತಿಶ್ರೇಷ್ಠನು ಅಲ್ಲಾಹನಲ್ಲವೇ?"** (ಕುರ್‌ಆನ್ 95/8)

﴿ وَمَنْ أَحْسَنُ مِنَ ٱللَّهِ حُكْمًا لِّقَوْمٍ يُوقِنُونَ ﴿٥٠﴾ ﴾

**"ದೃಢವಾಗಿ ವಿಶ್ವಾಸವಿಡುವ ಜನತೆಗೆ ಅಲ್ಲಾಹನಿಗಿಂತಲೂ ಉತ್ತಮವಾಗಿ ತೀರ್ಪು ನೀಡುವವನು ಯಾರಿದ್ದಾನೆ?"** (ಕುರ್‌ಆನ್ 5/50)

ಅಲ್ಲಾಹು ಖಂಡಿತವಾಗಿಯೂ ತನ್ನ ಸಜ್ಜನ ದಾಸರನ್ನು (ಔಲಿಯಾಗಳನ್ನು) ಪ್ರೀತಿಸುತ್ತಾನೆ ಮತ್ತು ಅವರು ಅವನನ್ನು ಪ್ರೀತಿಸುತ್ತಾರೆ ಎಂದು ನಾವು ವಿಶ್ವಾಸವಿಡುತ್ತೇವೆ.

﴿ قُلْ إِن كُنتُمْ تُحِبُّونَ ٱللَّهَ فَٱتَّبِعُونِى يُحْبِبْكُمُ ٱللَّهُ ﴾

**"(ಓ ಪ್ರವಾದಿ!) ಹೇಳು: ನೀವು ಅಲ್ಲಾಹನನ್ನು ಪ್ರೀತಿಸುತ್ತೀರಿ ಎಂದಾದರೆ ನನ್ನನ್ನು ಅನುಸರಿಸಿರಿ. ಅಲ್ಲಾಹು ನಿಮ್ಮನ್ನು ಪ್ರೀತಿಸುವನು."** (ಕುರ್‌ಆನ್ 3/31)

﴿ فَسَوْفَ يَأْتِى ٱللَّهُ بِقَوْمٍ يُحِبُّهُمْ وَيُحِبُّونَهُۥٓ ﴾

**"ಅಲ್ಲಾಹು ಒಂದು ಸಮೂಹವನ್ನು ತರುವನು. ಅವನು ಅವರನ್ನು ಪ್ರೀತಿಸುವನು ಮತ್ತು ಅವರು ಅವನನ್ನು ಪ್ರೀತಿಸುವರು."** (ಕುರ್‌ಆನ್ 5/54)

﴿ وَٱللَّهُ يُحِبُّ ٱلصَّٰبِرِينَ ﴿١٤٦﴾ ﴾

**"ಸಹನಾಶೀಲರನ್ನು ಅಲ್ಲಾಹು ಪ್ರೀತಿಸುತ್ತಾನೆ."** (ಕುರ್‌ಆನ್ 3/146)

﴿ وَأَقْسِطُوٓا۟ ۖ إِنَّ ٱللَّهَ يُحِبُّ ٱلْمُقْسِطِينَ ﴿٩﴾ ﴾

**"ಮತ್ತು ನ್ಯಾಯ ಪಾಲಿಸಿರಿ. ಖಂಡಿತವಾಗಿಯೂ ನ್ಯಾಯ ಪಾಲಿಸುವವರನ್ನು ಅಲ್ಲಾಹು ಪ್ರೀತಿಸುತ್ತಾನೆ."** (ಕುರ್‌ಆನ್ 49/9)

﴿ وَأَحْسَنُوا۟ ۗ وَٱللَّهُ يُحِبُّ ٱلْمُحْسِنِينَ ﴿٩٣﴾ ﴾

**"ಮತ್ತು ಸತ್ಕರ್ಮಗೈಯ್ಯಿರಿ. ಸತ್ಕರ್ಮಗೈಯ್ಯುವವರನ್ನು ಅಲ್ಲಾಹು ಪ್ರೀತಿಸುತ್ತಾನೆ."** (ಕುರ್‌ಆನ್ 5/93)

ಖಂಡಿತವಾಗಿಯೂ ಅಲ್ಲಾಹು ಮಾತು ಮತ್ತು ಕರ್ಮಗಳ ಪೈಕಿ ಶರೀಅತ್ ಆಗಿ ಮಾಡಿರುವವುಗಳನ್ನು (ಧರ್ಮನಿರ್ದೇಶನಗೊಳಿಸಿದವುಗಳನ್ನು) ಇಷ್ಟಪಡುತ್ತಾನೆ

ಮತ್ತು ಅವುಗಳ (ಮಾತು ಮತ್ತು ಕರ್ಮಗಳ) ಪೈಕಿ ಅವನು ವಿರೋಧಿಸಿದವುಗಳನ್ನು ಅಸಹ್ಯಪಡುತ್ತಾನೆ ಎಂದು ನಾವು ವಿಶ್ವಾಸವಿಡುತ್ತೇವೆ.

﴿ إِن تَكْفُرُواْ فَإِنَّ ٱللَّهَ غَنِيٌّ عَنكُمْ ۖ وَلَا يَرْضَىٰ لِعِبَادِهِ ٱلْكُفْرَ ۖ وَإِن تَشْكُرُواْ يَرْضَهُ لَكُمْ ۗ ﴾

**“ನೀವು ಅವಿಶ್ವಾಸವಿಡುವುದಾದರೆ ಖಂಡಿತವಾಗಿಯೂ ಅಲ್ಲಾಹು ನಿಮ್ಮಿಂದ ನಿರಪೇಕ್ಷನಾಗಿದ್ದಾನೆ (ಅಲ್ಲಾಹನಿಗೆ ನಿಮ್ಮ ಅಗತ್ಯವೇ ಇಲ್ಲ). ತನ್ನ ದಾಸರಿಗೆ ಅವನು ಅವಿಶ್ವಾಸವನ್ನು ತೃಪ್ತಿಪಡುವುದಿಲ್ಲ. ನೀವು (ವಿಶ್ವಾಸವಿಟ್ಟು) ಕೃತಜ್ಞತೆ ಸಲ್ಲಿಸುವುದಾದರೆ ಅವನು ಅದನ್ನು ನಿಮಗೋಸ್ಕರ ತೃಪ್ತಿಪಡುತ್ತಾನೆ.”** (ಕುರ್‌ಆನ್ 39/7)

﴿ وَلَٰكِن كَرِهَ ٱللَّهُ ٱنۢبِعَاثَهُمْ فَثَبَّطَهُمْ وَقِيلَ ٱقْعُدُواْ مَعَ ٱلْقَٰعِدِينَ ﴿٤٦﴾ ﴾

**“ಆದರೆ ಅವರು ಮುಂದಕ್ಕೆ ತೆರಳುವುದನ್ನು ಅಲ್ಲಾಹು ಅಸಹ್ಯಪಟ್ಟನು. ಆದ್ದರಿಂದ ಅವರನ್ನು ಹಿಂದೆಯೇ ಉಳಿಸಿಬಿಟ್ಟನು. ಮತ್ತು (ಅವರೊಂದಿಗೆ) ಹೇಳಲಾಯಿತು. (ತಮ್ಮ ಮನೆಯಲ್ಲೇ) ಕುಳಿತುಕೊಂಡಿರುವವರೊಂದಿಗೆ ನೀವೂ ಕುಳಿತುಕೊಳ್ಳಿರಿ.”** (ಕುರ್‌ಆನ್ 9/46)

ಖಂಡಿತವಾಗಿಯೂ ಅಲ್ಲಾಹು ವಿಶ್ವಾಸವಿಟ್ಟವರನ್ನು ಮತ್ತು ಸತ್ಕರ್ಮಗೈಯ್ಯುವವರನ್ನು ಪ್ರೀತಿಸುತ್ತಾನೆ ಎಂದು ನಾವು ವಿಶ್ವಾಸವಿಡುತ್ತೇವೆ.

﴿ رَّضِيَ ٱللَّهُ عَنْهُمْ وَرَضُواْ عَنْهُ ۚ ذَٰلِكَ لِمَنْ خَشِيَ رَبَّهُۥ ﴿٨﴾ ﴾

**“ಅಲ್ಲಾಹು ಅವರ ಕುರಿತು ತೃಪ್ತಿಪಟ್ಟಿದ್ದಾನೆ ಮತ್ತು ಅವರು ಅಲ್ಲಾಹನ ಕುರಿತು ತೃಪ್ತಿಪಟ್ಟಿದ್ದಾರೆ. ಯಾರು ತನ್ನ ಪ್ರಭುವನ್ನು ಭಯಪಡುತ್ತಾನೋ ಅವನಿಗಾಗಿದೆ ಇದು.”** (ಕುರ್‌ಆನ್ 98/8)

ಖಂಡಿತವಾಗಿಯೂ ಅವಿಶ್ವಾಸಿಗಳು ಮತ್ತಿತರರು ಸೇರಿದಂತೆ ಅಲ್ಲಾಹನ ಕೋಪ ಮತ್ತು ಕ್ರೋಧಕ್ಕೆ ಯಾರು ಅರ್ಹರಾಗಿದ್ದಾರೋ ಅವರ ಮೇಲೆ ಅಲ್ಲಾಹು ಕ್ರೋಧಗೊಳ್ಳುತ್ತಾನೆ ಎಂದು ನಾವು ವಿಶ್ವಾಸವಿಡುತ್ತೇವೆ.

﴿ ٱلظَّآنِّينَ بِٱللَّهِ ظَنَّ ٱلسَّوْءِ ۚ عَلَيْهِمْ دَآئِرَةُ ٱلسَّوْءِ ۖ وَغَضِبَ ٱللَّهُ عَلَيْهِمْ ﴾

**“ಅಲ್ಲಾಹನ ಕುರಿತು ಕೆಟ್ಟ ಕಲ್ಪನೆಗಳನ್ನು ಕಲ್ಪಿಸಿಕೊಳ್ಳುವವರು. ಅವರಿಗೆ ಅಪಮಾನಕರವಾದ ಶಿಕ್ಷೆಯಿದೆ. ಅವರ ಮೇಲೆ ಅಲ್ಲಾಹು ಕ್ರೋಧಗೊಂಡಿದ್ದಾನೆ.”** (ಕುರ್‌ಆನ್ 48/6)

﴿ وَلَٰكِن مَّن شَرَحَ بِٱلْكُفْرِ صَدْرًا فَعَلَيْهِمْ غَضَبٌ مِّنَ ٱللَّهِ وَلَهُمْ عَذَابٌ

﴿ عَظِيمٌ ﴾ ١٠٦

**“ಆದರೆ ಯಾರು ಅವಿಶ್ವಾಸಕ್ಕಾಗಿ ಹೃದಯವನ್ನು ತೆರೆಯುತ್ತಾನೋ ಅವರ ಮೇಲೆ ಅಲ್ಲಾಹನ ವತಿಯ ಕ್ರೋಧವಿದೆ. ಅವರಿಗೆ ಭಯಾನಕವಾದ ಶಿಕ್ಷೆಯಿದೆ.”** (ಕುರ್‌ಆನ್ 16/106)

ಖಂಡಿತವಾಗಿಯೂ ಅಲ್ಲಾಹನಿಗೆ ಘನತೆ ಗಾಂಭೀರ್ಯ ಮತ್ತು ಗೌರವದಿಂದ ಕೂಡಿದ ಮುಖವಿದೆಯೆಂದು ನಾವು ವಿಶ್ವಾಸವಿಡುತ್ತೇವೆ.

﴿ وَيَبْقَىٰ وَجْهُ رَبِّكَ ذُو الْجَلَالِ وَالْإِكْرَامِ ٢٧ ﴾

**“ಮತ್ತು ನಿನ್ನ ಪ್ರಭುವಿನ ಘನತೆ ಗಾಂಭೀರ್ಯ ಮತ್ತು ಗೌರವದಿಂದ ಕೂಡಿದ ಮುಖವು ಎಂದೆಂದಿಗೂ ಅವಶೇಷಿಸುವುದು.”** (ಕುರ್‌ಆನ್ 55/27)

ಖಂಡಿತವಾಗಿಯೂ ಅಲ್ಲಾಹನಿಗೆ ಎರಡು ಉದಾತ್ತವಾದ ಮಹಾನ್ ಕೈಗಳಿವೆಯೆಂದು ನಾವು ವಿಶ್ವಾಸವಿಡುತ್ತೇವೆ.[12]

﴿ بَلْ يَدَاهُ مَبْسُوطَتَانِ يُنفِقُ كَيْفَ يَشَاءُ ﴾

**“ವಸ್ತುತಃ ಅವನ (ಅಲ್ಲಾಹನ) ಎರಡು ಕೈಗಳೂ ವಿಶಾಲವಾಗಿ ಚಾಚಲ್ಪಟ್ಟಿವೆ. ಅವನು ಇಚ್ಛಿಸುವ ರೀತಿಯಲ್ಲಿ ಅವನು ವ್ಯಯಿಸುತ್ತಾನೆ.”** (ಕುರ್‌ಆನ್ 5/64)

---

**12**. ಅಲ್ಲಾಹನ ಕೈಯನ್ನು ಪ್ರಸ್ತಾಪಿಸುವ ಹದೀಸೊಂದನ್ನು ವರದಿ ಮಾಡಿದ ನಂತರ ಇಮಾಮ್ ತಿರ್ಮಿದಿ ತನ್ನ ‘ಸುನನ್’ನಲ್ಲಿ (3/266–268) ಹೀಗೆಂದಿದ್ದಾರೆ: ‘ಅಲ್ಲಾಹು ಎಲ್ಲ ರಾತ್ರಿಗಳಲ್ಲೂ ಅತಿಕೆಳಗಿನ ಆಕಾಶಕ್ಕೆ ಇಳಿದು ಬರುತ್ತಾನೆ ಮುಂತಾದ ಅಲ್ಲಾಹನ ಸಿಫತ್(ವಿಶೇಷಣ)ಗಳನ್ನು ಪ್ರಸ್ತಾಪಿಸುವ ಈ ಹದೀಸ್ ಮತ್ತು ಇದರಂತಿರುವ ಹದೀಸ್‌ಗಳ ಕುರಿತು ಒಂದಕ್ಕಿಂತಲೂ ಅಧಿಕ ವಿದ್ವಾಂಸರು ಹೀಗೆಂದಿದ್ದಾರೆ: ‘ಈ ವರದಿಗಳನ್ನು ದೃಢೀಕರಿಸಬೇಕು ಮತ್ತು ಅವುಗಳ ಮೇಲೆ ವಿಶ್ವಾಸವಿಡಬೇಕು. ಅವುಗಳ ಕುರಿತು ಕಲ್ಪನೆಗಳನ್ನು ಕಲ್ಪಿಸಿಕೊಳ್ಳಕೂಡದು ಮತ್ತು ಅವು ಹೇಗೆ ಎಂದು ಪ್ರಶ್ನಿಸಕೂಡದು.’ ಮಾಲಿಕ್ ಇಬ್ನ್ ಅನಸ್, ಸುಫ್ಯಾನ್ ಇಬ್ನ್ ಉಯಯ್ನಾ, ಅಬ್ದುಲ್ಲಾಹ್ ಇಬ್ನುಲ್ ಮುಬಾರಕ್ ಮುಂತಾದವರು ಕೂಡ ಇದೇ ರೀತಿ ಹೇಳಿದ್ದಾರೆಂದು ವರದಿಯಾಗಿದೆ. ಈ ಹದೀಸ್‌ಗಳ ಕುರಿತು ಅವರು ಹೇಳಿದರು: ‘ಅವುಗಳನ್ನು ಹಾಗೆಯೇ ಸ್ವೀಕರಿಸಿರಿ. ಹೇಗೆ ಎಂದು ಪ್ರಶ್ನಿಸಬೇಡಿ.’ ಇವು ಅಹ್ಲುಸ್ಸುನ್ನಃ ವಲ್‌ಜಮಾಅಃದ ವಿದ್ವಾಂಸರ ಮಾತುಗಳಾಗಿವೆ. ಜಹ್ಮಿಯ್ಯಃಗಳ ಕುರಿತು ಹೇಳುವುದಾದರೆ ಅವರು ಇಂತಹ ಹದೀಸ್‌ಗಳನ್ನು ನಿರಾಕರಿಸಿದ್ದಾರೆ ಮತ್ತು ಇವು ತಶ್ಬೀಹ್ (ಹೋಲಿಕೆ) ಎಂದು ಹೇಳಿದ್ದಾರೆ. ಅಲ್ಲಾಹು ತನ್ನ ಗ್ರಂಥದಲ್ಲಿ ಅನೇಕ ಕಡೆ ಕೈ, ಆಲಿಸುವಿಕೆ, ದೃಷ್ಟಿ ಮುಂತಾದವುಗಳ ಕುರಿತು ಪ್ರಸ್ತಾಪಿಸಿದ್ದಾನೆ. ಆದರೆ ಜಹ್ಮಿಯ್ಯಃಗಳು ಈ ಆಯತ್ತ್‌ಗಳನ್ನು ವ್ಯಾಖ್ಯಾನಿಸತೊಡಗಿದರು ಮತ್ತು ವಿದ್ವಾಂಸರು ಹೇಳದಂತಹ ಅರ್ಥಗಳನ್ನು ಅವುಗಳ ಮೇಲೆ ಹೇರಿದರು. ಅವರು ಹೇಳಿದರು: ‘ಅಲ್ಲಾಹು ತನ್ನ ಕೈಯಿಂದ ಆದಮ್‌ರನ್ನು ಸೃಷ್ಟಿಸಿಲ್ಲ.’ ಅವರು ಹೇಳಿದರು: ‘ಇಲ್ಲಿ ಕೈ ಎಂಬುದರ ತಾತ್ಪರ್ಯ ಅಲ್ಲಾಹನ ಶಕ್ತಿಯಾಗಿದೆ.’ ಇಸ್‌ಹಾಕ್ ಇಬ್ನ್ ಇಬ್ರಾಹೀಮ್ ಹೇಳಿದರು: ‘ಅಲ್ಲಾಹನ ಕೈ ನನ್ನ ಕೈಯಂತೆ ಮತ್ತು ಅಲ್ಲಾಹನ ಆಲಿಸುವಿಕೆ ನನ್ನ ಆಲಿಸುವಿಕೆಯಂತೆ ಎಂದು ಹೇಳಿದರೆ ಅದು ತಶ್ಬೀಹ್ (ಹೋಲಿಕೆ) ಆಗಿದೆ. ಈ ರೀತಿ ಯಾರಾದರೂ ಹೇಳಿದರೆ ಅದು ತಶ್ಬೀಹ್ ಆಗಿದೆ. ಅಲ್ಲಾಹು ಹೇಳಿದಂತೆ ಯಾರಾದರೂ ಕೈ, ಆಲಿಸುವಿಕೆ, ದೃಷ್ಟಿ ಎಂದು ಹೇಳಿದರೆ ಮತ್ತು ಅದು ಹೇಗೆ ಎಂದು ಪ್ರಶ್ನಿಸದಿದ್ದರೆ ಹಾಗೂ ಅದನ್ನು ತನ್ನ ಕೈ, ತನ್ನ ಆಲಿಸುವಿಕೆ ಮತ್ತು ತನ್ನ ದೃಷ್ಟಿಯೊಂದಿಗೆ ಹೋಲಿಸದಿದ್ದರೆ ಅದು ತಶ್ಬೀಹ್ ಆಗುವುದಿಲ್ಲ’.’

﴿ وَمَا قَدَرُواْ ٱللَّهَ حَقَّ قَدْرِهِۦ وَٱلْأَرْضُ جَمِيعًا قَبْضَتُهُۥ يَوْمَ ٱلْقِيَٰمَةِ وَٱلسَّمَٰوَٰتُ مَطْوِيَّٰتُۢ بِيَمِينِهِۦ ۚ سُبْحَٰنَهُۥ وَتَعَٰلَىٰ عَمَّا يُشْرِكُونَ ﴿٦٧﴾ ﴾

**“ಅಲ್ಲಾಹನನ್ನು ಗಣಿಸಬೇಕಾದ ರೀತಿಯಲ್ಲಿ ಅವರು ಗಣಿಸಲಿಲ್ಲ. ಅಂತ್ಯದಿನದಂದು ಭೂಮಿ ಸಂಪೂರ್ಣವಾಗಿ ಅವನ ಒಂದು ಹಿಡಿಯಲ್ಲಿರುವುದು ಮತ್ತು ಆಕಾಶಗಳು ಸುರುಳಿಯಾಗಿ ಮಡಲ್ಪಟ್ಟು ಅವನ ಬಲಗೈಯಲ್ಲಿರುವುದು. ಅವರು ಸಹಭಾಗಿಗಳನ್ನು ಕಲ್ಪಿಸಿಕೊಳ್ಳುವುದರಿಂದ ಅವನು ಅದೆಷ್ಟೋ ಪರಮ ಪಾವನನೂ, ಅತ್ಯುನ್ನತನೂ ಆಗಿದ್ದಾನೆ.”** (ಕುರ್‌ಆನ್ 39/67)

ಖಂಡಿತವಾಗಿಯೂ ಅಲ್ಲಾಹನಿಗೆ ಎರಡು ನಿಜವಾದ ಕಣ್ಣುಗಳಿವೆ ಎಂದು ನಾವು ವಿಶ್ವಾಸವಿಡುತ್ತೇವೆ. ಯಾಕೆಂದರೆ ಅವನು ಹೇಳಿದ್ದಾನೆ:

﴿ وَٱصْنَعِ ٱلْفُلْكَ بِأَعْيُنِنَا وَوَحْيِنَا ﴾

**“ನಮ್ಮ ಕಣ್ಣುಗಳ ಮತ್ತು ನಮ್ಮ ದಿವ್ಯ ಸಂದೇಶದ ಅಡಿಯಲ್ಲಿ ಹಡಗನ್ನು ನಿರ್ಮಿಸು.”** (ಕುರ್‌ಆನ್ 11/37)

ಮತ್ತು ಪ್ರವಾದಿ(ﷺ)ರವರು ಹೇಳಿದರು:

«حِجَابُهُ النُّورُ لَوْ كَشَفَهُ لَأَحْرَقَتْ سُبُحَاتُ وَجْهِهِ مَا انْتَهَى إِلَيْهِ بَصَرُهُ مِنْ خَلْقِهِ»

**“ಪ್ರಕಾಶವು ಅವನ ಪರದೆಯಾಗಿದೆ. ಅವನೇನಾದರೂ ಅದನ್ನು ಸರಿಸುವುದಾದರೆ ಅವನ ಮುಖದ ಪ್ರಭೆಯು ಅವನ ದೃಷ್ಟಿಯು ತಲುಪುವವರೆಗೆ ಅವನ ಸೃಷ್ಟಿಯನ್ನು ಉರಿಸಿಬಿಡುವುದು.”**[13]

ಅಲ್ಲಾಹನಿಗಿರುವ ಕಣ್ಣುಗಳು ಎರಡು ಎಂಬ ಬಗ್ಗೆ ಅಹ್ಲುಸ್ಸುನ್ನಃದ ವಿದ್ವಾಂಸರು ಏಕಾಭಿಪ್ರಾಯ ಹೊಂದಿದ್ದಾರೆ. ಪ್ರವಾದಿ(ﷺ)ರವರು ದಜ್ಜಾಲನ ಕುರಿತು ಹೇಳಿದ ವಚನವು ಇದನ್ನು ಬಲಪಡಿಸುತ್ತದೆ:

«إِنَّهُ أَعْوَرُ وَإِنَّ رَبَّكُمْ لَيْسَ بِأَعْوَرَ»

**“ಅವನು ಒಕ್ಕಣ್ಣನಾಗಿದ್ದಾನೆ ಮತ್ತು ನಿಮ್ಮ ಪ್ರಭು ಖಂಡಿತವಾಗಿಯೂ ಒಕ್ಕಣ್ಣನಲ್ಲ.”**[14]

---

**13**. ಇದನ್ನು ಮುಸ್ಲಿಮ್ ತನ್ನ ‘ಸಹೀಹ್’ನಲ್ಲಿ (1/161; ಹದೀಸ್ ನಂ. 179) ಮತ್ತು ಇಬ್ನ್ ಮಾಜ ತನ್ನ ‘ಸುನನ್’ನಲ್ಲಿ (1/70; ಹದೀಸ್ ನಂ. 195) ವರದಿ ಮಾಡಿದ್ದಾರೆ.

**14**. ಇದನ್ನು ಬುಖಾರಿ ತನ್ನ ಸಹೀಹ್‌ನಲ್ಲಿ (3/1113; ಹದೀಸ್ ನಂ. 2892) ಮತ್ತು ಮುಸ್ಲಿಮ್ ತನ್ನ ಸಹೀಹ್‌ನಲ್ಲಿ (4/2248; ಹದೀಸ್ ನಂ. 2933) ವರದಿ ಮಾಡಿದ್ದಾರೆ. ಅಬುಲ್ ಹಸನ್ ಅಲ್‌ಅಶ್‌ಅರೀ ತನ್ನ ‘ಅಲ್‌ಇಬಾನಃ’ದಲ್ಲಿ (ಪುಟ 9) ಹೇಳಿದ್ದಾರೆ: ‘ಅಲ್ಲಾಹನಿಗೆ ಎರಡು ಕಣ್ಣುಗಳಿವೆ. ಅವು ಹೇಗಿವೆ ಎಂಬುದು ಗೊತ್ತಿಲ್ಲ.’

﴿ لَّا تُدْرِكُهُ ٱلْأَبْصَـٰرُ وَهُوَ يُدْرِكُ ٱلْأَبْصَـٰرَ ۖ وَهُوَ ٱللَّطِيفُ ٱلْخَبِيرُ ﴿١٠٣﴾ ﴾

**"ದೃಷ್ಟಿಗಳು ಅವನನ್ನು ಗ್ರಹಿಸಲಾರವು. ಆದರೆ ಅವನು ಸರ್ವ ದೃಷ್ಟಿಗಳನ್ನೂ ಗ್ರಹಿಸುತ್ತಾನೆ. ಅವನು ಅತ್ಯಂತ ತೀಕ್ಷ್ಣಮತಿಯೂ ಸೂಕ್ಷ್ಮಜ್ಞಾನಿಯೂ ಆಗಿದ್ದಾನೆ."** (ಕುರ್‌ಆನ್ 6/103) ಎಂದು ನಾವು ವಿಶ್ವಾಸವಿಡುತ್ತೇವೆ.

ವಿಶ್ವಾಸಿಗಳು ಪುನರುತ್ಥಾನ ದಿನದಂದು ಖಂಡಿತವಾಗಿಯೂ ತಮ್ಮ ಪ್ರಭುವನ್ನು ಕಾಣುವರು ಎಂದು ನಾವು ವಿಶ್ವಾಸವಿಡುತ್ತೇವೆ.

﴿ وُجُوهٌ يَوْمَئِذٍ نَّاضِرَةٌ ﴿٢٢﴾ إِلَىٰ رَبِّهَا نَاظِرَةٌ ﴿٢٣﴾ ﴾

**"ಅಂದು ಕೆಲವು ಮುಖಗಳು ಹೊಳೆಯುತ್ತಿರುವುವು. ಅವು ತಮ್ಮ ಪ್ರಭುವಿನೆಡೆಗೆ ನೋಡುತ್ತಿರುವುವು."** (ಕುರ್‌ಆನ್ 75/22–23)

ತನ್ನ ವಿಶೇಷಣಗಳ ಸಮಗ್ರತೆಯಿಂದಾಗಿ ಖಂಡಿತವಾಗಿಯೂ ಅಲ್ಲಾಹನಿಗೆ ಸರಿಸಾಟಿಯಾಗಿ ಯಾರೂ ಇಲ್ಲವೆಂದು ನಾವು ವಿಶ್ವಾಸವಿಡುತ್ತೇವೆ.

﴿ لَيْسَ كَمِثْلِهِۦ شَىْءٌ ۖ وَهُوَ ٱلسَّمِيعُ ٱلْبَصِيرُ ﴿١١﴾ ﴾

**"ಅವನಿಗೆ ಹೋಲಿಕೆಯಾಗಿ ಏನೊಂದೂ ಇಲ್ಲ. ಅವನು ಎಲ್ಲವನ್ನೂ ಆಲಿಸುವವನೂ ಕಾಣುವವನೂ ಆಗಿದ್ದಾನೆ."** (ಕುರ್‌ಆನ್ 42/11)

ಅವನ ಜೀವ ಮತ್ತು ಸ್ವಅಸ್ತಿತ್ವದ ಸಮಗ್ರತೆಯಿಂದಾಗಿ

﴿ لَا تَأْخُذُهُۥ سِنَةٌ وَلَا نَوْمٌ ﴾

**"ನಿದ್ದೆಯಾಗಲಿ ತೂಕಡಿಕೆಯಾಗಲಿ ಅವನನ್ನು ವಶಪಡಿಸಲಾರದು."** (ಕುರ್‌ಆನ್ 2/255) ಎಂದು ನಾವು ವಿಶ್ವಾಸವಿಡುತ್ತೇವೆ.

ಅವನ ನ್ಯಾಯ ತತ್ಪರತೆಯ ಸಮಗ್ರತೆಯಿಂದಾಗಿ ಖಂಡಿತವಾಗಿಯೂ ಅವನು ಯಾರಿಗೂ ಅನ್ಯಾಯವೆಸಗುವುದಿಲ್ಲ ಎಂದು ನಾವು ವಿಶ್ವಾಸವಿಡುತ್ತೇವೆ.

ತನ್ನ ಸೂಕ್ಷ್ಮ ನೋಟ ಮತ್ತು ಸರ್ವಜ್ಞತೆಯ ಸಮಗ್ರತೆಯಿಂದಾಗಿ ಅವನು ತನ್ನ ಸೃಷ್ಟಿಗಳ ಕರ್ಮಗಳ ಕುರಿತು ಖಂಡಿತವಾಗಿಯೂ ನಿರ್ಲಕ್ಷ್ಯನಲ್ಲ ಎಂದು ನಾವು ವಿಶ್ವಾಸವಿಡುತ್ತೇವೆ.

ಅವನ ಜ್ಞಾನ ಮತ್ತು ಸಾಮರ್ಥ್ಯದ ಸಮಗ್ರತೆಯಿಂದಾಗಿ ಆಕಾಶಗಳಲ್ಲಾಗಲಿ ಭೂಮಿಯಲ್ಲಾಗಲಿ ಯಾವೊಂದು ವಸ್ತುವೂ ಖಂಡಿತವಾಗಿಯೂ ಅವನನ್ನು ಸೋಲಿಸಲಾರದು ಎಂದು ನಾವು ವಿಶ್ವಾಸವಿಡುತ್ತೇವೆ.

﴿ إِنَّمَآ أَمْرُهُۥٓ إِذَآ أَرَادَ شَيْـًٔا أَن يَقُولَ لَهُۥ كُن فَيَكُونُ ﴿٨٢﴾ ﴾

**"ಯಾವುದೇ ವಸ್ತು ಉಂಟಾಗಬೇಕೆಂದು ಅವನು ಬಯಸಿದರೆ ಅವನ ಆಜ್ಞೆಯು**

**ಅವನು ಅದರೊಂದಿಗೆ 'ಕುನ್' (ಉಂಟಾಗು) ಎಂದು ಹೇಳುವುದು ಮಾತ್ರವಾಗಿದೆ. ತಕ್ಷಣ ಅದು ಉಂಟಾಗುತ್ತದೆ."** (ಕುರ್‌ಆನ್ 36/82)[15]

ಅವನ ಶಕ್ತಿಯ ಸಮಗ್ರತೆಯಿಂದಾಗಿ ಖಂಡಿತವಾಗಿಯೂ ಅವನೆಂದೂ ದಣಿಯುವುದಿಲ್ಲ ಮತ್ತು ಆಯಾಸಗೊಳ್ಳುದಿಲ್ಲವೆಂದು ನಾವು ವಿಶ್ವಾಸವಿಡುತ್ತೇವೆ.

﴿ وَلَقَدْ خَلَقْنَا ٱلسَّمَٰوَٰتِ وَٱلْأَرْضَ وَمَا بَيْنَهُمَا فِى سِتَّةِ أَيَّامٍ وَمَا مَسَّنَا مِن لُّغُوبٍ ﴿٣٨﴾ ﴾

**"ಆಕಾಶಗಳನ್ನು ಭೂಮಿಯನ್ನು ಮತ್ತು ಅವುಗಳ ನಡುವೆಯಿರುವವುಗಳನ್ನು ಖಂಡಿತವಾಗಿಯೂ ನಾವು ಆರು ದಿನಗಳಲ್ಲಿ ಸೃಷ್ಟಿಸಿದ್ದೇವೆ ಮತ್ತು ಯಾವ ದಣಿವೂ ನಮ್ಮನ್ನು ಸ್ಪರ್ಶಿಸಿಲ್ಲ."** (ಕುರ್‌ಆನ್ 50/38)

ನಾಮ ಮತ್ತು ವಿಶೇಷಣಗಳ ಪೈಕಿ ಅಲ್ಲಾಹು ತನ್ನ ಮೇಲೆ ದೃಢೀಕರಿಸಿದ ಮತ್ತು ಅವನ ಸಂದೇಶವಾಹಕ(ﷺ)ರವರು ಅವನ ಮೇಲೆ ದೃಢೀಕರಿಸಿದವುಗಳ ದೃಢೀಕರಣದಲ್ಲಿ ನಾವು ವಿಶ್ವಾಸವಿಡುತ್ತೇವೆ. ಈ ವಿಷಯದಲ್ಲಿ ಎರಡು ಮಹಾ ಅಪಾಯಗಳಿಂದ ಸ್ವತಃ ನಮ್ಮನ್ನು ನಾವು ಮುಕ್ತಗೊಳಿಸುತ್ತೇವೆ.

**ಒಂದು: 'ತಮ್ಸೀಲ್'** (ಹೋಲಿಕೆ): ಅಲ್ಲಾಹನ ವಿಶೇಷಣಗಳು ಅವನ ಸೃಷ್ಟಿಯ ವಿಶೇಷಣಗಳಂತಿವೆ ಎಂದು ಹೃದಯದಲ್ಲಿ ವಿಶ್ವಾಸವಿಡುವುದು ಅಥವಾ ನಾಲಗೆಯಿಂದ ಹೇಳುವುದು.[16]

---

**15**. 'ಅಲ್ಲಾಹು ಎಲ್ಲ ವಸ್ತುಗಳ ಮೇಲೂ ಸಾಮರ್ಥ್ಯವುಳ್ಳವನಾಗಿದ್ದಾನೆ' (2/284) ಎಂಬ ಕುರ್‌ಆನ್ ವಚನದ ಕುರಿತು ಪ್ರಸ್ತಾಪಿಸುತ್ತಾ ಇಬ್ನ್ ಅಬಿಲ್ ಇಝ್ಝ್ ತನ್ನ 'ಶರ್ಹು ಅಕೀದತಿ ತ್ತಹಾವಿಯ್ಯಃ'ದಲ್ಲಿ (ಪುಟ 137) ಹೇಳಿದ್ದಾರೆ: 'ಸಾಧ್ಯವಾಗುವ ಎಲ್ಲವೂ ಇದರಲ್ಲಿ ಒಳಗೊಳ್ಳುತ್ತದೆ. ಸಹಜವಾಗಿ ಯಾವುದು ಅಸಾಧ್ಯವಾಗಿದೆಯೋ –ಅಂದರೆ ಒಂದು ವಸ್ತು ಒಂದೇ ಸಮಯದಲ್ಲಿ ಅಸ್ತಿತ್ವದಲ್ಲಿರುವುದು ಮತ್ತು ಅದೇ ಸಮಯದಲ್ಲಿ ಅದು ಅಸ್ತಿತ್ವದಲ್ಲಿಲ್ಲದಿರುವುದು ಎಂದಾದರೆ– ಆ ವಸ್ತುವಿಗೆ ವಾಸ್ತವಿಕತೆಯಿಲ್ಲ, ಅದರ ಅಸ್ತಿತ್ವವನ್ನು ಗ್ರಹಿಸಲು ಸಾಧ್ಯವಿಲ್ಲ ಮತ್ತು ಬುದ್ಧಿಯುಳ್ಳವರ ಒಮ್ಮತಾಭಿಪ್ರಾಯ ಪ್ರಕಾರ ಅದು ವಸ್ತುವೇ ಅಲ್ಲ. ತನಗೆ ಹೊರಲು ಸಾಧ್ಯವಾಗದ ಕಲ್ಲೊಂದನ್ನು ಸೃಷ್ಟಿಸಲು ಅಲ್ಲಾಹನಿಗೆ ಸಾಧ್ಯವೇ? ಎಂದು ಕೆಲವರು ಕೇಳುವುದು ಈ ವಿಧದಲ್ಲಿ ಸೇರುತ್ತದೆ. ಅಲ್ಲಾಹನಿಗೆ ಅಂತಹ ಕಲ್ಲನ್ನು ಸೃಷ್ಟಿಸಲು ಸಾಧ್ಯವಿಲ್ಲ ಎಂದಾದರೆ ಅವನು ಎಲ್ಲ ವಸ್ತುಗಳ ಮೇಲೂ ಸಾಮರ್ಥ್ಯ ಇರುವವನಲ್ಲ. ಅವನಿಗೆ ಅದು ಸಾಧ್ಯವಿದೆ ಎಂದಾದರೂ ಅದನ್ನು ಹೊರಲು ಸಾಧ್ಯವಿಲ್ಲದ ಕಾರಣ ಅವನು ಎಲ್ಲ ವಸ್ತುಗಳ ಮೇಲೂ ಸಾಮರ್ಥ್ಯ ಇರುವವನಲ್ಲ. ಈ ವಾದದಲ್ಲಿರುವ ಕುತರ್ಕವೂ ಸ್ವತಃ ಆ ಕಾರ್ಯವು ಅಸಂಭವ್ಯವಾಗಿದೆ ಮತ್ತು ಕೆಲವೊಂದು ಜನರ ಮನಸ್ಸಿನಲ್ಲಷ್ಟೇ ಉದಿಸುತ್ತದೆ ಎಂಬುದಾಗಿದೆ ವಾಸ್ತವಿಕತೆ. ಜನರ ಮನಸ್ಸಿನಲ್ಲಿ ಮೂಡುವ ಎಲ್ಲದ್ದಕ್ಕೂ ಸಾಧ್ಯವಾಗುವ ಅಸ್ತಿತ್ವವಿದೆ ಎಂದು ಹೇಳಲಾಗುವುದಿಲ್ಲ. ಹಾಗೆಯೇ ಅವೆಲ್ಲವನ್ನೂ ವಸ್ತು ಎಂದು ಕರೆಯಲಾಗುವುದೂ ಇಲ್ಲ.'
ನೋಡಿ: 'ಮಜ್ಮೂಅ್ ಫತಾವಾ ಇಬ್ನ್ ತೈಮಿಯ್ಯಃ' (8/8–10)

**16**. ಇಮಾಮ್ ಬುಖಾರಿಯವರ ಗುರುವರ್ಯರಾದ ನುಐಮ್ ಇಬ್ನ್ ಹಮ್ಮಾದ್ ಹೇಳಿದರು: 'ಯಾರು ಅಲ್ಲಾಹನನ್ನು ಅವನ ಸೃಷ್ಟಿಯೊಂದಿಗೆ ಹೋಲಿಸುತ್ತಾನೋ ಅವನು ಅವಿಶ್ವಾಸಿಯಾಗಿದ್ದಾನೆ. ಯಾರು ಅಲ್ಲಾಹು ತನ್ನ ಕುರಿತು ವಿಶೇಷಣವಾಗಿ ಹೇಳಿರುವುದನ್ನು ನಿರಾಕರಿಸುತ್ತಾನೋ ಅವನೂ ಅವಿಶ್ವಾಸಿಯಾಗಿದ್ದಾನೆ. ಅಲ್ಲಾಹು ತನ್ನ ಕುರಿತು ವಿಶೇಷಣವಾಗಿ ಹೇಳಿರುವುದರಲ್ಲಿ ಮತ್ತು ಸಂದೇಶವಾಹಕ

**ಎರಡು: 'ತಕ್ಯೀಫ್'** (ವಿಧಾನವನ್ನು ವಿವರಿಸುವುದು): ಅಲ್ಲಾಹನ ವಿಶೇಷಣಗಳು ಹೀಗೆ ಹೀಗೆ ಇವೆ ಎಂದು ಹೃದಯದಲ್ಲಿ ವಿಶ್ವಾಸವಿಡುವುದು ಅಥವಾ ನಾಲಗೆಯಿಂದ ಹೇಳುವುದು.

ಅಲ್ಲಾಹು ಅವನ ಕುರಿತು ನಿರಾಕರಿಸಿದ ಮತ್ತು ಅವನ ಸಂದೇಶವಾಹಕ(ﷺ)ರವರು ಅವನ ಕುರಿತು ನಿರಾಕರಿಸಿದವುಗಳ ನಿರಾಕರಣೆಯಲ್ಲಿ ನಾವು ವಿಶ್ವಾಸವಿಡುತ್ತೇವೆ. ಈ ನಿರಾಕರಣೆಯು ಅದಕ್ಕೆ ವಿರುದ್ಧವಾಗಿರುವುದರ ಸಮಗ್ರತೆಯ ದೃಢೀಕರಣವನ್ನು ಹೊಂದಿರುತ್ತದೆಂದು ನಾವು ವಿಶ್ವಾಸವಿಡುತ್ತೇವೆ.(17) ಅಲ್ಲಾಹು ಮತ್ತು ಸಂದೇಶವಾಹಕ (ﷺ)ರವರು ಯಾವೆಲ್ಲ ವಿಷಯಗಳ ಕುರಿತು ಮೌನ ತಾಳಿರುವರೋ ಅವೆಲ್ಲ ವಿಷಯಗಳ ಕುರಿತು ನಾವೂ ಮೌನ ತಾಳುತ್ತೇವೆ.

ನಮ್ಮ ದೃಷ್ಟಿಕೋನದ ಪ್ರಕಾರ ಈ ಹಾದಿಯಲ್ಲಿ ಚಲಿಸುವುದು ಕಡ್ಡಾಯವೂ ಅನಿವಾರ್ಯವೂ ಆಗಿದೆ. ಅದು ಯಾಕೆಂದರೆ ಅಲ್ಲಾಹು ಅವನ ಕುರಿತು ಏನೆಲ್ಲ ದೃಢೀಕರಿಸುತ್ತಾನೋ ಮತ್ತು ಅವನ ಕುರಿತು ಏನೆಲ್ಲ ನಿರಾಕರಿಸುತ್ತಾನೋ ಅವೆಲ್ಲವೂ ಅಲ್ಲಾಹು ಅವನ ಕುರಿತು ನಮಗೆ ತಿಳಿಸುವ ಮಾಹಿತಿ (ಖಬರ್)ಗಳಾಗಿವೆ. ಅವನ ಕುರಿತು ಅತ್ಯಂತ ತಿಳುವಳಿಕೆಯುಳ್ಳವನು ಅವನೇ ಆಗಿದ್ದಾನೆ, ಅವನು ಮಾತಿನಲ್ಲಿ ಅತ್ಯಂತ ಸತ್ಯಸಂಧನಾಗಿದ್ದಾನೆ ಮತ್ತು ಅತಿಸುಂದರವಾಗಿ ಮಾತನಾಡುವವನಾಗಿದ್ದಾನೆ. ಅವನ ಸೃಷ್ಟಿಗಳು ಅವನ ಜ್ಞಾನವನ್ನು ಆವರಿಸಲಾರರು.

ಅವನ ಸಂದೇಶವಾಹಕ(ﷺ)ರವರು ಅವನ ಕುರಿತು ಏನೆಲ್ಲ ದೃಢೀಕರಿಸಿದ್ದಾರೋ ಮತ್ತು ಏನೆಲ್ಲ ನಿರಾಕರಿಸಿದ್ದಾರೋ ಅದು ಕೂಡ ಅವರು ಅಲ್ಲಾಹನ ಕುರಿತು ನಮಗೆ ತಿಳಿಸುವ ಮಾಹಿತಿಗಳಾಗಿವೆ. ಅವರು ಸೃಷ್ಟಿಗಳ ಪೈಕಿ ಅಲ್ಲಾಹನ ಕುರಿತು ಅತ್ಯಂತ ತಿಳುವಳಿಕೆಯುಳ್ಳವರಾಗಿದ್ದಾರೆ. ಅವರು ಸೃಷ್ಟಿಗಳ ಪೈಕಿ ಅತ್ಯಂತ ಪ್ರಾಮಾಣಿಕರಾಗಿದ್ದಾರೆ, ಅತ್ಯಂತ ಸತ್ಯಸಂಧರಾಗಿದ್ದಾರೆ ಮತ್ತು ಅತ್ಯಂತ ಸ್ಪಷ್ಟವಾಗಿ ಮಾತನಾಡುವವರಾಗಿದ್ದಾರೆ. ಆದ್ದರಿಂದ ಅಲ್ಲಾಹನ ವಚನಗಳಲ್ಲಿ ಮತ್ತು ಅವನ ಸಂದೇಶವಾಹಕ(ﷺ)ರವರ ವಚನಗಳಲ್ಲಿ ಜ್ಞಾನ, ಸತ್ಯಸಂಧತೆ ಮತ್ತು ವಿವರಣೆಯ ಸಮಗ್ರತೆಯಿದೆ. ಆದ್ದರಿಂದ

---

(ﷺ)ರವರು ಅವನ ಕುರಿತು ವಿಶೇಷಣವಾಗಿ ಹೇಳಿರುವುದರಲ್ಲಿ ಯಾವ ಹೋಲಿಕೆಯನ್ನೂ ಮಾಡಕೂಡದು.' ಇದನ್ನು ಹಾಫಿದ್ ಅದ್ದಹಬೀ ತನ್ನ 'ಅಲ್‌ಉಲುವ್ವು ಲಿಲ್ ಅಲಿಯ್ಯಿಲ್ ಗಫ್ಫಾರ್'ನಲ್ಲಿ (ಪುಟ 97) ಉದ್ಧರಿಸಿದ್ದಾರೆ. ಇದರ ಸನದ್ ಸಹೀಹ್ ಆಗಿದೆಯೆಂದು 'ಮುಖ್ತಸರುಲ್ ಉಲುವ್ವ್'ನಲ್ಲಿ (ಪುಟ 184) ಹೇಳಲಾಗಿದೆ.

**17.** ಶೈಖ್ ಉಸೈಮೀನ್‌ರವರು ತನ್ನ 'ಫತ್‌ಹು ರಬ್ಬಿಲ್ ಬರಿಯ್ಯಃ' ಎಂಬ ಗ್ರಂಥದಲ್ಲಿ (ಪುಟ 37) ಇದಕ್ಕೊಂದು ಉದಾಹರಣೆಯನ್ನು ನೀಡಿದ್ದಾರೆ: ಅಲ್ಲಾಹು ತನ್ನ ಕುರಿತು ದೌರ್ಜನ್ಯವನ್ನು ನಿರಾಕರಿಸುತ್ತಾನೆ. ಅಲ್ಲಾಹು ದೌರ್ಜನ್ಯವೆಸಗುತ್ತಾನೆ ಎಂಬುದನ್ನು ನಿರಾಕರಿಸುವಾಗ ಅದಕ್ಕೆ ವಿರುದ್ಧವಾಗಿರುವ ಪರಿಪೂರ್ಣ ಮತ್ತು ಸಮಗ್ರ ನ್ಯಾಯವು ಸ್ಥಾಪಿತವಾಗುತ್ತದೆ. ಅಂದರೆ ಅಲ್ಲಾಹು ಪರಿಪೂರ್ಣ ಮತ್ತು ಸಮಗ್ರ ನ್ಯಾಯವನ್ನು ಪಾಲಿಸುತ್ತಾನೆ ಎಂಬುದನ್ನು ದೃಢೀಕರಿಸಲಾಗುತ್ತದೆ. ಅದೇ ರೀತಿ ಅಲ್ಲಾಹು ತನ್ನ ಕುರಿತು ದಣಿವನ್ನು ನಿರಾಕರಿಸುತ್ತಾನೆ. ಅಲ್ಲಾಹು ದಣಿವಾಗುತ್ತಾನೆ ಎಂಬುದನ್ನು ನಿರಾಕರಿಸುವಾಗ ಅದಕ್ಕೆ ವಿರುದ್ಧವಾಗಿರುವ ಪರಿಪೂರ್ಣ ಮತ್ತು ಸಮಗ್ರ ಶಕ್ತಿ ಮತ್ತು ಸಾಮರ್ಥ್ಯವು ಸ್ಥಾಪಿತವಾಗುತ್ತದೆ. ಅಂದರೆ ಅಲ್ಲಾಹು ಪರಿಪೂರ್ಣ ಮತ್ತು ಸಮಗ್ರ ಶಕ್ತಿ ಸಾಮರ್ಥ್ಯಗಳನ್ನು ಹೊಂದಿದ್ದಾನೆ ಎಂಬುದನ್ನು ದೃಢೀಕರಿಸಲಾಗುತ್ತದೆ.

ಅವುಗಳನ್ನು ತಿರಸ್ಕರಿಸಲು ಅಥವಾ ಅವುಗಳ ಸ್ವೀಕಾರಯೋಗ್ಯತೆಯಲ್ಲಿ ಸಂಶಯ ತಾಳಲು ನಮಗೆ ಯಾವುದೇ ನೆಪವೂ ಇಲ್ಲ.[18]

**18**. ಶೈಖ್ ಅಬ್ದುರ್ರಹ್ಮಾನ್ ಅಸ್ಸಅ್‌ದೀ ತನ್ನ 'ತನ್ಬೀಹಾತುಲ್ಲತೀಫಃ'ದಲ್ಲಿ (ಪುಟ 18) ಹೇಳಿದ್ದಾರೆ: 'ಮೂರು ಕಾರಣಗಳಿಂದಾಗಿ ಮಾತನಾಡುವುದರಲ್ಲಿ ನ್ಯೂನತೆಯಿರುತ್ತದೆ. ಒಂದೋ ಮಾತನಾಡುವವನು ಅಜ್ಞಾನಿಯಾಗಿರುತ್ತಾನೆ ಮತ್ತು ಅವನಿಗೆ ವಿದ್ಯೆಯ ಕೊರತೆಯಿರುತ್ತದೆ. ಅಥವಾ ಅವನ ಮಾತುಗಳಲ್ಲಿ ನಿರರ್ಗಳತೆ ಮತ್ತು ವಿವರಣೆಯ ಕೊರತೆಯಿರುತ್ತದೆ. ಅಥವಾ ಅವನು ಸುಳ್ಳು ನುಡಿಯುತ್ತಾನೆ ಮತ್ತು ಮಾತನ್ನು ವಿರೂಪಗೊಳಿಸುತ್ತಾನೆ. ಆದರೆ ಕುರ್‌ಆನ್ ಮತ್ತು ಸುನ್ನತ್ತಿನಲ್ಲಿರುವ ವಚನಗಳು ಎಲ್ಲ ಕೋನಗಳಿಂದಲೂ ಈ ಎಲ್ಲ ನ್ಯೂನತೆಗಳಿಂದ ಮುಕ್ತವಾಗಿದೆ. ಅಲ್ಲಾಹು ಮತ್ತು ಅವನ ಸಂದೇಶವಾಹಕ (ﷺ)ರವರ ಮಾತುಗಳು ಅತ್ಯಂತ ಅತ್ಯಂತ ಸ್ಪಷ್ಟ ಮತ್ತು ವಿವರಣೆಯಿಂದ ಕೂಡಿದೆ ಮತ್ತು ಅವು ಸತ್ಯಸಂಧತೆಯ ಉತ್ತುಂಗತೆಯಲ್ಲಿದೆ.'

# الاعتماد في الإثبات والنفي على الكتاب والسنة وما سار عليه سلف الأمة

## ದೃಢೀಕರಣ ಮತ್ತು ನಿರಾಕರಣೆಯಲ್ಲಿ ಕುರ್‌ಆನ್, ಸುನ್ನತ್ ಮತ್ತು ಸಲಫು ಸ್ಸಾಲಿಹ್‌ಗಳು ಚಲಿಸಿದ ಹಾದಿಯ ಅವಲಂಬನೆ

ಅಲ್ಲಾಹನ ವಿಶೇಷಣಗಳ ಪೈಕಿ ವಿಶದವಾಗಿ ಅಥವಾ ಮೊತ್ತವಾಗಿ, ದೃಢೀಕರಣವಾಗಿ ಅಥವಾ ನಿರಾಕರಣೆಯಾಗಿ ನಾವು ಪ್ರಸ್ತಾಪಿಸಿರುವ ವಿಷಯಗಳಿಗೆ ನಮ್ಮ ಪ್ರಭುವಾದ ಅಲ್ಲಾಹನ ಗ್ರಂಥ ಮತ್ತು ನಮ್ಮ ಪ್ರವಾದಿಯಾದ ಮುಹಮ್ಮದ್(ﷺ)ರವರ ಸುನ್ನತ್ತನ್ನು ನಾವು ಅವಲಂಬಿಸಿದ್ದೇವೆ ಹಾಗೂ ಸಮುದಾಯದ ಸಚ್ಚರಿತರಾದ ಪೂರ್ವಿಕರು (ಸಲಫು ಸ್ಸಾಲಿಹೀನ್‌ಗಳು) ಮತ್ತು ಮಾರ್ಗದರ್ಶನದ ನೇತಾರರು (ಅಇಮ್ಮತುಲ್ ಹುದಾ) ಹಾಗೂ ಅವರ ನಂತರದವರು ಯಾವೊಂದು ಮಾರ್ಗದಲ್ಲಿ ಚಲಿಸಿದ್ದಾರೋ ಆ ಮಾರ್ಗದಲ್ಲಿ ಚಲಿಸಿದ್ದೇವೆ.

ಕುರ್‌ಆನ್ ಮತ್ತು ಸುನ್ನತ್‌ನ ವಚನಗಳನ್ನು ಅವುಗಳ ಬಾಹ್ಯಾರ್ಥದಲ್ಲೇ ಕೊಂಡೊಯ್ಯುವುದು ಮತ್ತು ಅಲ್ಲಾಹನಿಗೆ ಹೊಂದಿಕೆಯಾಗುವಂತೆ ಅವುಗಳ ನೈಜ ಅರ್ಥದಲ್ಲೇ ಕೊಂಡೊಯ್ಯುವುದು ಕಡ್ಡಾಯವಾಗಿದೆ ಎಂದು ನಾವು ಅಭಿಪ್ರಾಯಪಡುತ್ತೇವೆ.

ಅವುಗಳನ್ನು (ಕುರ್‌ಆನ್ ಮತ್ತು ಸುನ್ನತ್‌ನ ವಚನಗಳನ್ನು) ತಹ್ರೀಫ್[19]

---

**19**. ಇಮಾಮ್ ಅಸ್ಸಅ್‌ದೀರವರ 'ತನ್ಬೀಹಾತುಲ್ಲತೀಫಃ' ಎಂಬ ಗ್ರಂಥಕ್ಕೆ ಬರೆದ ಟಿಪ್ಪಣಿಯಲ್ಲಿ (ಪುಟ 13) ಶೈಖ್ ಇಬ್ನ್ ಬಾಝ್ ಹೇಳಿದ್ದಾರೆ: 'ತಹ್ರೀಫ್ ಎಂದರೆ (ಕುರ್‌ಆನ್ ಮತ್ತು ಸುನ್ನತ್‌ನ ವಚನಗಳಲ್ಲಿರುವ) ಅಲ್ಲಾಹನ ನಾಮ ಮತ್ತು ವಿಶೇಷಣಗಳ ಪದಗಳನ್ನು ಬದಲಾಯಿಸುವುದು ಅಥವಾ ಅವುಗಳ ಅರ್ಥಗಳನ್ನು ಬದಲಾಯಿಸುವುದು. ಉದಾಹರಣೆಗೆ ಇಸ್ತವಾ (ಆರೂಢನಾದನು) ಎಂಬ ಪದವನ್ನು ಜಹ್ಮಿಯ್ಯಃಗಳು ಇಸ್ತೌಲಾ (ಅಧಿಕಾರಕ್ಕೇರಿದನು) ಎಂದು ಬದಲಾಯಿಸಿದರು. ಹಾಗೆಯೇ ಕೆಲವು ನೂತನವಾದಿಗಳು ಗದಬ್ (ಕ್ರೋಧ) ಎಂಬುದಕ್ಕೆ ಇರಾದತುಲ್ ಇನ್ತಿಕಾಮ್ (ಶಿಕ್ಷಿಸಲು ಇಚ್ಛಿಸುವುದು) ಎಂದೂ, ರಹ್ಮತ್ (ಕರುಣೆ) ಎಂಬುದಕ್ಕೆ ಇರಾದತುಲ್ ಇನ್‌ಆಮ್ (ಅನುಗ್ರಹಿಸಲು ಇಚ್ಛಿಸುವುದು) ಎಂದೂ ಅರ್ಥಕೊಟ್ಟರು. ಇವೆಲ್ಲವೂ ತಹ್ರೀಫ್‌ಗಳಾಗಿವೆ. ಇಸ್ತವಾ ಎಂಬುದನ್ನು ಅವರು ಇಸ್ತೌಲಾ ಎಂದು ಬದಲಾಯಿಸಿದ್ದು ಪದವನ್ನು ತಹ್ರೀಫ್ ಮಾಡುವುದಾಗಿದ್ದರೆ, ಗದಬ್ ಎಂಬುದಕ್ಕೆ ಶಿಕ್ಷಿಸಲು ಇಚ್ಛಿಸುವುದು ಮತ್ತು ರಹ್ಮತ್ ಎಂಬುದಕ್ಕೆ ಅನುಗ್ರಹಿಸಲು ಇಚ್ಛಿಸುವುದು ಎಂದು ಅರ್ಥ ಕೊಟ್ಟಿರುವುದು ಅರ್ಥವನ್ನು ತಹ್ರೀಫ್ ಮಾಡುವುದಾಗಿದೆ. ಸತ್ಯವೇನೆಂದರೆ ಇಸ್ತವಾ ಎಂದರೆ ಇರ್ತಫಅ ಅಥವಾ ಅಲಾ (ಮೇಲೇರಿದವನಾದನು, ಆರೂಢನಾದನು) ಎಂದಾಗಿದೆ. ಇದು ಅದರ ಭಾಷಿಕ ಅರ್ಥವೂ ಆಗಿದೆ. ಇಸ್ತವಾ ಎಂದರೆ ಅಲ್ಲಾಹನ ಮಹತ್ವಕ್ಕೆ ಮತ್ತು ಸಾರ್ವಭೌಮತ್ವಕ್ಕೆ ಹೊಂದಿಕೆಯಾಗುವ ವಿಧದಲ್ಲಿ ಅವನು ಅರ್ಶ್‌ನ ಮೇಲೇರಿದವನಾದನು, ಆರೂಢನಾದನು ಎಂದು ಸೂಚಿಸುವುದಕ್ಕೋಸ್ಕರವೇ ಕುರ್‌ಆನ್ ಈ ಪದವನ್ನು ಬಳಸಿದೆ. ಅದೇ ರೀತಿ ಕುರ್‌ಆನ್ ಮತ್ತು ಸುನ್ನತ್‌ನಲ್ಲಿರುವ ಇತರೆಲ್ಲ ವಿಶೇಷಣಗಳಂತೆ ಕ್ರೋಧ

ಮಾಡುವವರ ಮಾರ್ಗದಿಂದ ಅಂದರೆ ಅಲ್ಲಾಹು ಮತ್ತು ಅವನ ರಸೂಲ್(ﷺ)ರವರು ಉದ್ದೇಶಿಸದ ಅರ್ಥದೆಡೆಗೆ ಅವುಗಳನ್ನು ಬದಲಾಯಿಸುವವರ ಮಾರ್ಗದಿಂದ ನಾವು ಮುಕ್ತರಾಗಿದ್ದೇವೆ.

ಅವುಗಳನ್ನು (ಕುರ್‌ಆನ್ ಮತ್ತು ಸುನ್ನತ್‌ನ ವಚನಗಳನ್ನು) ತಅ್‌ತೀಲ್[20] ಮಾಡುವವರ ಮಾರ್ಗದಿಂದ ಅಂದರೆ ಅಲ್ಲಾಹು ಮತ್ತು ಅವನ ರಸೂಲ್(ﷺ)ರವರು ಉದ್ದೇಶಿಸಿದ ಅರ್ಥದಿಂದ ಅವುಗಳನ್ನು ಬರಿದಾಗಿಸುವವರ ಮಾರ್ಗದಿಂದ ನಾವು ಮುಕ್ತರಾಗಿದ್ದೇವೆ.

ಅವುಗಳಲ್ಲಿ (ಕುರ್‌ಆನ್ ಮತ್ತು ಸುನ್ನತ್‌ನ ವಚನಗಳಲ್ಲಿ) ಹದ್ದುಮೀರುವವರ ಮಾರ್ಗದಿಂದ ಅಂದರೆ ಅವುಗಳನ್ನು ತಮ್ಸೀಲ್‌ನ[21] ಮೇಲೆ ಕೊಂಡೊಯ್ಯುವವರ ಮತ್ತು ಅವುಗಳ ಕುರಿತು ತಕ್ಯೀಫ್‌ನ್ನು[22] ಅನಿವಾರ್ಯಗೊಳಿಸುವವರ ಮಾರ್ಗದಿಂದ

---

ಮತ್ತು ಕರುಣೆ ಎಂಬ ಎರಡು ವಿಶೇಷಣಗಳು ಕೂಡ ಅಲ್ಲಾಹನ ಮಹತ್ವ ಮತ್ತು ಸಾರ್ವಭೌಮತ್ವಕ್ಕೆ ಹೊಂದಿಕೆಯಾಗುವ ರೀತಿಯಲ್ಲಿರುವ ವಿಶೇಷಣಗಳಾಗಿವೆ.'

**20**. ಇಮಾಮ್ ಅಸ್ಸಅ್‌ದೀರವರ 'ತನ್ಬೀಹಾತುಲ್ಲತೀಫಃ' ಎಂಬ ಗ್ರಂಥಕ್ಕೆ ಬರೆದ ಟಿಪ್ಪಣಿಯಲ್ಲಿ (ಪುಟ 13) ಶೈಖ್ ಇಬ್ನ್ ಬಾಝ್ ಹೇಳಿದ್ದಾರೆ: 'ತಅ್‌ತೀಲ್ ಎಂದರೆ ಅಲ್ಲಾಹನಿಂದ ಅವನ ವಿಶೇಷಣವನ್ನು ಹಿಂತೆಗೆಯುವುದು ಅಥವಾ ಅವನಿಗೆ ಅದನ್ನು ನಿರಾಕರಿಸುವುದು. ಆಭರಣವಿಲ್ಲದೆ ಬರಿದಾಗಿರುವ ಕೊರಳನ್ನು ಅರಬಿಗಳು ಜೀದ್ ಮುಅತ್ತಲ್ ಎನ್ನುತ್ತಿದ್ದರು. ಇದರಿಂದಲೇ ಈ ಪದವನ್ನು ಪಡೆಯಲಾಗಿದೆ.  ಜಹ್ಮಿಯ್ಯಃಗಳು ಮತ್ತು ಅವರಂತಿರುವವರು ಅಲ್ಲಾಹನನ್ನು ಅವನ ವಿಶೇಷಣಗಳಿಂದ ಬರಿದಾಗಿಸಿದರು (ನಿರ್ಗುಣಗೊಳಿಸಿದರು). ಈ ಕಾರಣದಿಂದಲೇ ಅವರನ್ನು ಮುಅತ್ತಲಃ ಎನ್ನಲಾಗುತ್ತದೆ. (ಅಲ್ಲಾಹು ನಿರ್ಗುಣನಾಗಿದ್ದಾನೆ ಎಂಬ) ಅವರ ವಾದವು ಅತಿದೊಡ್ಡ ಮಿಥ್ಯವಾಗಿದೆ. ಯಾಕೆಂದರೆ ಗುಣ (ವಿಶೇಷಣ)ಗಳಿಲ್ಲದ ಒಂದು ಸತ್ವದ ಅಸ್ತಿತ್ವವನ್ನು ಬುದ್ಧಿ ಅಂಗೀಕರಿಸುವುದಿಲ್ಲ. ಅಲ್ಲಾಹನ ಮಹತ್ವ ಮತ್ತು ಸಾರ್ವಭೌಮತ್ವಕ್ಕೆ ಹೊಂದಿಕೆಯಾಗುವ ವಿಧದಲ್ಲಿ ಅವನ ವಿಶೇಷಣಗಳನ್ನು ಕುರ್‌ಆನ್ ಮತ್ತು ಸುನ್ನತ್ ಧಾರಾಳವಾಗಿ ದೃಢೀಕರಿಸಿದೆ.'

**21**. ಇಮಾಮ್ ಅಸ್ಸಅ್‌ದೀರವರ 'ತನ್ಬೀಹಾತುಲ್ಲತೀಫಃ' ಎಂಬ ಗ್ರಂಥಕ್ಕೆ ಬರೆದ ಟಿಪ್ಪಣಿಯಲ್ಲಿ (ಪುಟ 13) ಶೈಖ್ ಇಬ್ನ್ ಬಾಝ್ ಹೇಳಿದ್ದಾರೆ: 'ತಮ್ಸೀಲ್ ಎಂದರೆ ಹೋಲಿಸುವುದಾಗಿದೆ. ಆದ್ದರಿಂದ ಅಲ್ಲಾಹನ ಸತ್ವವು (ದಾತ್) ನಮ್ಮ ಸತ್ವದಂತಿದೆ ಅಥವಾ ನಮ್ಮ ಸತ್ವವನ್ನು ಹೋಲುತ್ತದೆ ಎನ್ನಕೂಡದು. ಅದೇ ರೀತಿ ಅಲ್ಲಾಹನ ವಿಶೇಷಣಗಳ ಕುರಿತು ಕೂಡ ಅವನ ವಿಶೇಷಣಗಳು ನಮ್ಮ ವಿಶೇಷಣಗಳಂತಿವೆ ಅಥವಾ ನಮ್ಮ ವಿಶೇಷಣಗಳನ್ನು ಹೋಲುವಂತಿವೆ ಎನ್ನಕೂಡದು. ಅಲ್ಲಾಹನಿಗೆ ಹೋಲಿಕೆಯಾಗಿ ಯಾವೊಂದು ವಸ್ತುವೂ ಇಲ್ಲ ಮತ್ತು ಅಲ್ಲಾಹನಿಗೆ ಹೋಲಿಕೆಯಾಗುವ ಏನನ್ನಾದರೂ ನೀನು ಅರಿತಿರುವೆಯಾ ಎಂಬ ಎರಡು ಕುರ್‌ಆನ್ ವಚನಗಳಿಗೆ ನಿಷ್ಠನಾಗಿರುವುದು ಪ್ರತಿಯೊಬ್ಬ ವಿಶ್ವಾಸಿಯ ಮೇಲೂ ಕಡ್ಡಾಯವಾಗಿದೆ.'

**22**. ಇಮಾಮ್ ಅಸ್ಸಅ್‌ದೀರವರ 'ತನ್ಬೀಹಾತುಲ್ಲತೀಫಃ' ಎಂಬ ಗ್ರಂಥಕ್ಕೆ ಬರೆದ ಟಿಪ್ಪಣಿಯಲ್ಲಿ (ಪುಟ 13) ಶೈಖ್ ಇಬ್ನ್ ಬಾಝ್ ಹೇಳಿದ್ದಾರೆ: 'ತಕ್ಯೀಫ್ ಎಂದರೆ ವಿಶೇಷಣ ಉಂಟಾಗುವ ವಿಧಾನವನ್ನು ವಿವರಿಸುವುದು. ಆದ್ದರಿಂದ ಅಲ್ಲಾಹು ಹೇಗೆ ಆರೂಢನಾಗುತ್ತಾನೆ? ಅವನ ಕೈ ಹೇಗಿದೆ? ಅವನ ಮುಖ ಹೇಗಿದೆ? ಇತ್ಯಾದಿ ಪ್ರಶ್ನೆಗಳನ್ನು ನಾವು ಕೇಳಕೂಡದು. ಯಾಕೆಂದರೆ ಅಲ್ಲಾಹನ ವಿಶೇಷಣಗಳ ಕುರಿತು ಮಾತನಾಡುವುದು ಎಂದರೆ ಅವನ ದೈವಿಕ ಸತ್ವದ (ದಾತ್) ಕುರಿತು ಮಾತನಾಡುವುದಾಗಿದೆ. ವಿಶೇಷಣಗಳ ಕುರಿತು ಪ್ರಶ್ನಿಸುವುದು ಅವನ ದಾತ್‌ನ ಕುರಿತು ಪ್ರಶ್ನಿಸುವುದಾಗಿದೆ. ಅಲ್ಲಾಹನಿಗೆ ದೈವಿಕ ಸತ್ವ (ದಾತ್) ಇದೆ ಮತ್ತು ಅದು ಹೇಗಿದೆಯೆಂಬುದು ನಮಗೆ ತಿಳಿದಿಲ್ಲ ಎಂಬಂತೆಯೇ ಅವನಿಗೆ ಸಿಫಾತ್ (ವಿಶೇಷಣಗಳು) ಇವೆ ಮತ್ತು ಅವು ಹೇಗಿವೆಯೆಂಬುದು ನಮಗೆ ತಿಳಿದಿಲ್ಲ ಎಂದು ನಾವು

ನಾವು ಮುಕ್ತರಾಗಿದ್ದೇವೆ.

ಅಲ್ಲಾಹನ ಗ್ರಂಥದಲ್ಲಿ ಅಥವಾ ರಸೂಲ್(ﷺ)ರವರ ಸುನ್ನತ್ತಿನಲ್ಲಿ ಏನೆಲ್ಲ ಬಂದಿವೆಯೋ ಅವೆಲ್ಲವೂ ಸತ್ಯವಾಗಿದೆ ಮತ್ತು ಅವು ಪರಸ್ಪರ ವಿರೋಧಾಭಾಸಗಳನ್ನು ಸೂಚಿಸುವುದಿಲ್ಲ ಎಂದು ದೃಢವಾದ ಜ್ಞಾನದಿಂದ ನಾವು ಅರಿತಿದ್ದೇವೆ.

ಯಾಕೆಂದರೆ ಅಲ್ಲಾಹು ಹೇಳಿದ್ದಾನೆ:

﴿ أَفَلَا يَتَدَبَّرُونَ ٱلْقُرْءَانَ وَلَوْ كَانَ مِنْ عِندِ غَيْرِ ٱللَّهِ لَوَجَدُوا۟ فِيهِ ٱخْتِلَـٰفًا كَثِيرًا ﴿٨٢﴾ ﴾

**“ಅವರು ಕುರ್‌ಆನ್‌ನ ಕುರಿತು ಚಿಂತಿಸುವುದಿಲ್ಲವೇ? ಅದು ಅಲ್ಲಾಹನ ಹೊರತಾದವರ ವತಿಯಿಂದಾಗಿದ್ದರೆ ಅವರದರಲ್ಲಿ ಅನೇಕ ವಿರುದ್ಧೋಕ್ತಿಗಳನ್ನು ಕಾಣುತ್ತಿದ್ದರು.”** (ಕುರ್‌ಆನ್ 4/82)

ಯಾಕೆಂದರೆ ವಚನಗಳಲ್ಲಿರುವ ವಿರೋಧಾಭಾಸಗಳು ಒಂದು ಮತ್ತೊಂದನ್ನು ಸುಳ್ಳಾಗಿಸುವುದನ್ನು ಅನಿವಾರ್ಯವಾಗಿಸುತ್ತದೆ.[23] ಆದರೆ ಅಲ್ಲಾಹನ ಗ್ರಂಥದಲ್ಲಿ ಮತ್ತು ರಸೂಲ್(ﷺ)ರವರ ಸುನ್ನತ್ತಿನಲ್ಲಿ ಇವುಗಳಿರುವುದು ಅಸಂಭವ್ಯವಾಗಿದೆ.

ಅಲ್ಲಾಹನ ಗ್ರಂಥದಲ್ಲಾಗಲಿ, ಪ್ರವಾದಿ(ﷺ)ರವರ ಸುನ್ನತ್‌ನಲ್ಲಾಗಲಿ, ಅಥವಾ ಅವೆರಡರ ನಡುವೆಯಾಗಲಿ ವಿರುದ್ಧೋಕ್ತಿಗಳಿವೆಯೆಂದು ಯಾರಾದರೂ ವಾದಿಸಿದರೆ ಅದು ಅವನ ಕೆಟ್ಟ ಉದ್ದೇಶದಿಂದಾಗಿದೆ ಮತ್ತು ಹೃದಯದ ವಕ್ರತೆಯಿಂದಾಗಿದೆ. ಆದ್ದರಿಂದ ಅವನು ಅಲ್ಲಾಹನೆಡೆಗೆ ತೌಬಾ ಮಾಡಲಿ ಮತ್ತು ತನ್ನ ವಕ್ರತೆಯಿಂದ ಬಿಟ್ಟುನಿಲ್ಲಲಿ.

ಅಲ್ಲಾಹನ ಗ್ರಂಥದಲ್ಲಾಗಲಿ, ಪ್ರವಾದಿ(ﷺ)ರವರ ಸುನ್ನತ್‌ನಲ್ಲಾಗಲಿ, ಅಥವಾ ಅವೆರಡರ ನಡುವೆಯಾಗಲಿ ವಿರುದ್ಧೋಕ್ತಿಗಳಿವೆಯೆಂದು ಯಾರಾದರೂ ಭಾವಿಸಿದರೆ ಅದು ಒಂದೋ ಅವನ ಜ್ಞಾನದ ಅಪೂರ್ಣತೆಯಿಂದಾಗಿದೆ, ಅಥವಾ ಗ್ರಹಿಸುವುದರಲ್ಲಿರುವ ಕೊರತೆಯಿಂದಾಗಿದೆ, ಅಥವಾ ಸೂಕ್ಷ್ಮವಾಗಿ ಅವಲೋಕಿಸುವುದರಲ್ಲಿರುವ ಕೊರತೆಯಿಂದಾಗಿದೆ. ಆದ್ದರಿಂದ ಅವನು ಜ್ಞಾನವನ್ನು ಅರಸಲಿ ಮತು ಸತ್ಯವು ಸ್ಪಷ್ಟವಾಗುವ ತನಕ ಸೂಕ್ಷ್ಮವಾಗಿ ಅವಲೋಕಿಸಲು ಪರಿಶ್ರಮಿಸಲಿ. ಆ ಬಳಿಕವೂ ಅವನಿಗೆ ಸತ್ಯವು ಸ್ಪಷ್ಟವಾಗದಿದ್ದಲ್ಲಿ ಆ ವಿಷಯವನ್ನು ಅದನ್ನು ಅರಿತಿರುವ ವಿದ್ವಾಂಸನಿಗೆ

---

ವಿಶ್ವಾಸವಿಡಬೇಕು. ಅಲ್ಲಾಹನ ದಾತ್ (ದೈವಿಕ ಸತ್ವ)ನ ಬಗ್ಗೆ ಅವನಿಗೆ ಮಾತ್ರ ತಿಳಿದಿದೆ ಎಂದು ನಾವು ವಿಶ್ವಾಸವಿಡುವಂತೆಯೇ ಅವನ ಸಿಫಾತ್ (ವಿಶೇಷಣ)ಗಳ ಬಗ್ಗೆ ಅವನಿಗೆ ಮಾತ್ರ ತಿಳಿದಿದೆ ಎಂದು ನಾವು ವಿಶ್ವಾಸವಿಡಬೇಕು.’

**23**. ಅಂದರೆ ಕುರ್‌ಆನ್‌ನ ಒಂದು ವಚನ ಇನ್ನೊಂದು ವಚನಕ್ಕೆ ವಿರುದ್ಧವಾಗಿದ್ದರೆ, ಹದೀಸಿನಲ್ಲಿರುವ ಒಂದು ವಚನ ಇನ್ನೊಂದು ವಚನಕ್ಕೆ ವಿರುದ್ಧವಾಗಿದ್ದರೆ, ಅಥವಾ ಹದೀಸಿನಲ್ಲಿರುವ ಒಂದು ವಚನ ಕುರ್‌ಆನ್‌ನ ವಚನವೊಂದಕ್ಕೆ ವಿರುದ್ಧವಾಗಿದ್ದರೆ ಆ ಎರಡು ವಿರುದ್ಧವಾಗಿರುವವುಗಳ ಪೈಕಿ ಕೇವಲ ಒಂದು ವಚನ ಮಾತ್ರ ಸತ್ಯವಾಗಿರಲು ಸಾಧ್ಯ. ಆದರೆ ಕುರ್‌ಆನ್‌ನಲ್ಲಾಗಲಿ ಸುನ್ನತ್‌ನಲ್ಲಾಗಲಿ ಇಂತಹ ವಿರುದ್ಧ ವಚನಗಳು ಕಾಣುವುದು ಅಸಾಧ್ಯ.

ವಹಿಸಿಕೊಡಲಿ ಮತ್ತು ತನ್ನ ಭಾವನೆಯಿಂದ ಹಿಂದೆ ಸರಿಯಲಿ ಹಾಗೂ ಜ್ಞಾನದಲ್ಲಿ ಆಳವಾಗಿ ಬೇರೂರಿರುವ ಜನರು ಹೇಳುವಂತೆ ಅವನೂ ಹೇಳಲಿ:

﴿ ءَامَنَّا بِهِۦ كُلٌّ مِّنْ عِندِ رَبِّنَا ﴾

**“ನಾವದರಲ್ಲಿ ವಿಶ್ವಾಸವಿಟ್ಟಿದ್ದೇವೆ. ಎಲ್ಲವೂ ನಮ್ಮ ಪ್ರಭುವಿನ ವತಿಯಿಂದಾಗಿದೆ.”** (ಕುರ್‌ಆನ್ 3/7)

ಖಂಡಿತವಾಗಿಯೂ ಕುರ್‌ಆನ್‌ನಲ್ಲಾಗಲಿ, ಸುನ್ನತ್‌ನಲ್ಲಾಗಲಿ ಅಥವಾ ಅವೆರಡರ ಮಧ್ಯೆಯಾಗಲಿ ಯಾವುದೇ ವಿರೋಧಾಭಾಸಗಳೋ ಭಿನ್ನಾಭಿಪ್ರಾಯಗಳೋ ಇಲ್ಲವೆಂದು ಅವನು ಅರಿತುಕೊಳ್ಳಲಿ.[24]

---

**24**. ಕುರ್‌ಆನ್ ಮತ್ತು ಹದೀಸ್‌ಗಳ ಮಧ್ಯೆ ವಿರೋಧಾಭಾಸಗಳಿವೆ ಎನ್ನುತ್ತಾ ಹದೀಸ್‌ಗಳನ್ನು ನಿಷೇಧಿಸುವ ಹದೀಸ್ ನಿಷೇಧಿ (ಮುಂಕಿರಿಸ್ಸುನ್ನಃ)ಗಳಲ್ಲಿ ಈ ಮೂರು ಲಕ್ಷಣಗಳೂ ಇವೆ. ಒಂದನೆಯದಾಗಿ ಕುರ್‌ಆನ್ ಮತ್ತು ಸುನ್ನತ್ತಿನ ಬಗ್ಗೆ ಅವರಿಗೆ ಜ್ಞಾನದ ಕೊರತೆಯಿದೆ. ಎರಡನೆಯದಾಗಿ ಕುರ್‌ಆನ್ ಮತ್ತು ಸುನ್ನತ್ತನ್ನು ಹೇಗೆ ಗ್ರಹಿಸಬೇಕೆಂದೇ ಅವರಿಗೆ ತಿಳಿದಿಲ್ಲ. ಮೂರನೆಯದಾಗಿ, ವಿರೋಧಾಭಾಸಗಳಾಗಿ ಕಂಡು ಬರುವ ವಚನಗಳನ್ನು ಸೂಕ್ಷ್ಮವಾಗಿ ಅವಲೋಕನ ಮಾಡಿ ಸತ್ಯವನ್ನು ಮನಗಾಣುವ ವ್ಯವಧಾನ ಅವರಿಗಿಲ್ಲ. ಇದರ ಜೊತೆಗೆ ತಮ್ಮ ಹೃದಯದ ವಕ್ರತೆಯಿಂದಾಗಿ ಮತ್ತು ತಮ್ಮ ಕೆಟ್ಟ ಉದ್ದೇಶಗಳ ಈಡೇರಿಕೆಗಾಗಿ ಪಾಮರ ಜನರನ್ನು ಅವರು ದಾರಿಗೆಡಿಸುತ್ತಿದ್ದಾರೆ. ಕುರ್‌ಆನ್ ಮತ್ತು ಸುನ್ನತ್ತನ್ನು ತಮಗೆ ತೋಚಿದಂತೆ ವ್ಯಾಖ್ಯಾನ ಮಾಡುವ ಈ ಮಂದಿ ತಮ್ಮನ್ನು ಅಹ್ಲೆ ಕುರ್‌ಆನ್ (ಕುರ್‌ಆನಿನ ಜನರು) ಎಂದು ಕರೆಯುವುದು ಸತ್ಯಕ್ಕೆ ಎಸಗುವ ಅಪಚಾರವಾಗಿದೆ. ವಾಸ್ತವಿಕವಾಗಿ ಅವರು ಹದೀಸ್ ನಿಷೇಧಿಗಳಷ್ಟೇ ಅಲ್ಲ, ಕುರ್‌ಆನ್ ನಿಷೇಧಿಗಳೂ ಆಗಿದ್ದಾರೆ. ಅವರ ಕೆಡುಕಿನಿಂದ ಅಲ್ಲಾಹು ನಮ್ಮನ್ನು ಪಾರು ಮಾಡಲಿ. ಆಮೀನ್.

# الإيمان بالملائكة
## ಮಲಕ್‌ಗಳಲ್ಲಿರುವ ವಿಶ್ವಾಸ

ನಾವು ಅಲ್ಲಾಹನ ಮಲಕ್‌ಗಳಲ್ಲಿ ವಿಶ್ವಾಸವಿಡುತ್ತೇವೆ. ಅವರು:

﴿بَلْ عِبَادٌ مُّكْرَمُونَ ﴿٢٦﴾ لَا يَسْبِقُونَهُۥ بِٱلْقَوْلِ وَهُم بِأَمْرِهِۦ يَعْمَلُونَ ﴿٢٧﴾﴾

**"ಗೌರವಾನ್ವಿತ ದಾಸರಾಗಿದ್ದಾರೆ. ಅವನು (ಅಲ್ಲಾಹು) ಮಾತನಾಡುವುದಕ್ಕಿಂತ ಮುಂಚಿತವಾಗಿ ಅವರು ಮಾತನಾಡುವುದಿಲ್ಲ ಮತ್ತು ಅವನ ಆಜ್ಞಾನುಸಾರ ಅವರು ಕಾರ್ಯನಿರ್ವಹಿಸುತ್ತಾರೆ."** (ಕುರ್‌ಆನ್ 21/26–27)

ಅಲ್ಲಾಹು ಅವರನ್ನು ಸೃಷ್ಟಿಸಿದ್ದಾನೆ ಮತ್ತು ಅವರು ಅಲ್ಲಾಹನ ಆರಾಧನೆಯಲ್ಲಿ ತಲ್ಲೀನರಾಗಿದ್ದಾರೆ ಹಾಗೂ ಅವನನ್ನು ಅನುಸರಿಸುವುದರಲ್ಲಿ ವಿಧೇಯರಾಗಿದ್ದಾರೆ.

﴿لَا يَسْتَكْبِرُونَ عَنْ عِبَادَتِهِۦ وَلَا يَسْتَحْسِرُونَ ﴿١٩﴾ يُسَبِّحُونَ ٱلَّيْلَ وَٱلنَّهَارَ لَا يَفْتُرُونَ ﴿٢٠﴾﴾

**"ಅಲ್ಲಾಹನ ಆರಾಧನೆ ಮಾಡುವುದರಲ್ಲಿ ಅವರು ಅಹಂಭಾವ ತೋರುವುದಿಲ್ಲ ಮತ್ತು (ಆರಾಧಿಸುವುದರಲ್ಲಿ) ಅವರಿಗೆ ದಣಿವಾಗುವುದೂ ಇಲ್ಲ. ಕ್ಷಣ ವಿಶ್ರಾಂತಿಯೂ ಇಲ್ಲದೆ ರಾತ್ರಿ ಹಗಲೂ ಅವರು ತಸ್ಬೀಹ್ ಹೇಳುತ್ತಿರುತ್ತಾರೆ."** (ಕುರ್‌ಆನ್ 21/19–20)

ಅಲ್ಲಾಹು ಅವರನ್ನು ನಮ್ಮಿಂದ ಮರೆಮಾಚಿದ್ದಾನೆ. ಆದ್ದರಿಂದ ನಾವವರನ್ನು ಕಾಣುವುದಿಲ್ಲ. ಆದರೆ ಕೆಲವೊಮ್ಮೆ ತನ್ನ ಅವನು ಸೃಷ್ಟಿಗಳ ಪೈಕಿ ಕೆಲವರಿಗೆ ಅವರನ್ನು ತೋರಿಸಿಕೊಡುತ್ತಾನೆ. ಪ್ರವಾದಿ(ﷺ)ರವರು ಜಿಬ್ರೀಲ್‌ರನ್ನು ಅವರ ನೈಜ ರೂಪದಲ್ಲಿ ಕಂಡಿದ್ದಾರೆ. ಅವರಿಗೆ ಆರುನೂರು ರೆಕ್ಕೆಗಳಿದ್ದವು ಮತ್ತು ಅವು ಮುಗಿಲನ್ನು ಸಂಪೂರ್ಣವಾಗಿ ಮುಚ್ಚಿಕೊಂಡಿತ್ತು.[25] ಒಮ್ಮೆ ಜಿಬ್ರೀಲ್ ಪರಿಪೂರ್ಣ ಮನುಷ್ಯರೂಪವನ್ನು ತಾಳಿ ಮರ್ಯಮ್‌ರನ್ನು ಭೇಟಿಯಾಗಿದ್ದರು. ಆಗ ಮರ್ಯಮ್ ಅವರೊಂದಿಗೆ ಮಾತನಾಡಿದರು ಮತ್ತು ಅವರು ಮರ್ಯಮ್‌ರೊಂದಿಗೆ ಮಾತನಾಡಿದರು.[26] ಒಮ್ಮೆ ಪ್ರವಾದಿ(ﷺ)ರವರು ತಮ್ಮ ಸಹಾಬಿಗಳೊಂದಿಗಿದ್ದಾಗ ಅವರು (ಜಿಬ್ರೀಲ್) ಯಾರಿಗೂ ಗುರುತುಹಚ್ಚಲು ಸಾಧ್ಯವಾಗದ ಮತ್ತು ಪ್ರಯಾಣದ ಯಾವ ಕುರುಹೂ

---

**25**. ನೋಡಿ: 'ಸಹೀಹುಲ್ ಬುಖಾರಿ' (3/1181; ಹದೀಸ್ ನಂ. 3060 ಮತ್ತು ಹದೀಸ್ ನಂ. 3063).

**26**. ನೋಡಿ: ಕುರ್‌ಆನ್ 19/17–21.

ಇಲ್ಲದ, ಶುಭ್ರವಾದ ಬಿಳಿ ಉಡುಪು ಮತ್ತು ಕಡುಗಪ್ಪು ತಲೆಗೂದಲಿನೊಂದಿಗೆ ಮನುಷ್ಯರೂಪ ತಾಳಿ ಬಂದಿದ್ದರು. ಹಾಗೆ ಅವರು ಪ್ರವಾದಿ(ﷺ)ರವರ ಮುಂಭಾಗದಲ್ಲಿ ತಮ್ಮ ಮಂಡಿಯನ್ನು ಪ್ರವಾದಿ(ﷺ)ರವರ ಮಂಡಿಗೆ ಜೋಡಿಸಿ ತಮ್ಮ ಅಂಗೈಗಳನ್ನು ಪ್ರವಾದಿ(ﷺ)ರವರ ತೊಡೆಯ ಮೇಲಿಟ್ಟು ಕುಳಿತರು. ತರುವಾಯ ಅವರು ಪ್ರವಾದಿ (ﷺ)ರವರೊಂದಿಗೆ ಮಾತನಾಡಿದರು ಮತ್ತು ಪ್ರವಾದಿ(ﷺ)ರವರು ಅವರೊಂದಿಗೆ ಮಾತನಾಡಿದರು. ಅವರು ಮಲಕ್ ಜಿಬ್ರೀಲ್ ಆಗಿದ್ದರೆಂದು ತರುವಾಯ ಪ್ರವಾದಿ(ﷺ) ರವರು ತಮ್ಮ ಸಹಾಬಾಗಳಿಗೆ ತಿಳಿಸಿಕೊಟ್ಟರು.[27]

ಮಲಕ್‌ಗಳಿಗೆ ಹೊಣೆ ವಹಿಸಿಕೊಡಲಾದ ಕೆಲವು ಕೆಲಸಗಳಿವೆ ಎಂದು ನಾವು ವಿಶ್ವಾಸವಿಡುತ್ತೇವೆ.

ಅವರ ಪೈಕಿ ಜಿಬ್ರೀಲ್‌ಗೆ ವಹ್ಯ್ ತಲುಪಿಸುವ ಕೆಲಸವನ್ನು ವಹಿಸಿಕೊಡಲಾಗಿದೆ. ಅವರು ಅದರೊಂದಿಗೆ ಅಲ್ಲಾಹನ ಬಳಿಯಿಂದ ಇಳಿದು ಅವನ ಪ್ರವಾದಿ ಮತ್ತು ಸಂದೇಶವಾಹಕರ ಪೈಕಿ ಅವನಿಚ್ಛಿಸಿದವರಿಗೆ ಅದನ್ನು ತಲುಪಿಸಿಕೊಡುತ್ತಾರೆ.

ಅವರ ಪೈಕಿ ಮಳೆ ಮತ್ತು ಸಸ್ಯಲತಾದಿಗಳ ಕೆಲಸವನ್ನು ವಹಿಸಿಕೊಡಲಾದ ಮೀಕಾಈಲ್ ಇದ್ದಾರೆ.

ಅವರ ಪೈಕಿ ಅಂತ್ಯದಿನ ಮತ್ತು ಪುನರುತ್ಥಾನದಂದು ಕಹಳೆಯನ್ನು ಊದುವ ಕೆಲಸವನ್ನು ವಹಿಸಿಕೊಡಲಾದ ಇಸ್ರಾಫೀಲ್ ಇದ್ದಾರೆ.

ಅವರ ಪೈಕಿ ಮರಣ ವೇಳೆಯಲ್ಲಿ ಆತ್ಮಗಳನ್ನು ವಶಪಡಿಸುವ ಕೆಲಸವನ್ನು ವಹಿಸಿಕೊಡಲಾದ ಮಲಕುಲ್ ಮೌತ್[28] ಇದ್ದಾರೆ.

ಅವರ ಪೈಕಿ ಪರ್ವತಗಳ ಕೆಲಸವನ್ನು ವಹಿಸಿಕೊಡಲಾದ ಮಲಕುಲ್ ಜಿಬಾಲ್ ಇದ್ದಾರೆ.

ಅವರ ಪೈಕಿ ನರಕವನ್ನು ಕಾವಲು ಕಾಯುವ ಕೆಲಸವನ್ನು ವಹಿಸಿಕೊಡಲಾದ ಮಾಲಿಕ್ ಇದ್ದಾರೆ.

ಅವರ ಪೈಕಿ ಗರ್ಭಗಳೊಳಗಿರುವ ಭ್ರೂಣಗಳ ಕೆಲಸವನ್ನು ವಹಿಸಿಕೊಡಲಾದ ಮಲಕ್‌ಗಳಿದ್ದಾರೆ. ಮನುಷ್ಯ ಸಂರಕ್ಷಣೆಯ ಕೆಲಸವನ್ನು ವಹಿಸಿಕೊಡಲಾದ ಇತರ ಕೆಲವು ಮಲಕ್‌ಗಳಿದ್ದಾರೆ. ಮನುಷ್ಯರ ಕರ್ಮಗಳನ್ನು ಬರೆದಿಡುವ ಕೆಲಸವನ್ನು ವಹಿಸಿಕೊಡಲಾದ ಬೇರೆ ಕೆಲವು ಮಲಕ್‌ಗಳೂ ಇದ್ದಾರೆ. ಪ್ರತಿಯೊಬ್ಬ ವ್ಯಕ್ತಿಯ ಜೊತೆಗೆ ಎರಡು ಮಲಕ್‌ಗಳಿದ್ದಾರೆ.

---

**27**. ನೋಡಿ: ಸಹೀಹ್ ಮುಸ್ಲಿಮ್ (1/36; ಹದೀಸ್ ನಂ. 8)

**28**. ಇಬ್ನ್ ಜರೀರ್ ಅತ್ತಬರೀ ತನ್ನ 'ತಫ್ಸೀರ್'ನಲ್ಲಿ (20/175) ಉದ್ಧರಿಸಿದಂತೆ ಕತಾದ ಮತ್ತಿತರರಿಂದ ಬಂದ ಕೆಲವು ವರದಿಗಳಲ್ಲಿ ಈ ಮಲಕ್‌ನ ಹೆಸರು 'ಅಝ್ರಾಈಲ್' ಎಂದಿದೆ. ಆದರೆ ಕುರ್‌ಆನ್‌ನಲ್ಲಾಗಲಿ ಸಹೀಹಾದ ಹದೀಸ್‌ಗಳಲ್ಲಾಗಲಿ ಈ ಹೆಸರು ಬರದಿರುವ ಕಾರಣ ಇದನ್ನು ಬಳಸುವುದು ಸುರಕ್ಷಿತವಲ್ಲ. ನೋಡಿ: ಶೈಖ್ ಉಸೈಮೀನ್‌ರವರ 'ಶರ್ಹು ಅಕೀದತಿ ತ್ತಹಾವಿಯ್ಯಃ' (1/60) ಮತ್ತು ಇಬ್ನ್ ಕಸೀರ್‌ರವರ 'ಅಲ್‌ಬಿದಾಯತು ವನ್ನಿಹಾಯಃ' (1/50).

﴿ عَنِ ٱلۡيَمِينِ وَعَنِ ٱلشِّمَالِ قَعِيدٞ ١٧ مَّا يَلۡفِظُ مِن قَوۡلٍ إِلَّا لَدَيۡهِ رَقِيبٌ عَتِيدٞ ١٨ ﴾

**“ಓರ್ವನು (ಮನುಷ್ಯನ) ಬಲದಲ್ಲಿಯೂ ಇನ್ನೋರ್ವನು ಎಡದಲ್ಲಿಯೂ ಇರುವರು. ಅವನು ಯಾವುದೇ ಮಾತನ್ನೂ ಆಡಲಾರನು ಅದನ್ನು ದಾಖಲಿಸಲು ಸಿದ್ಧನಾಗಿರುವ ಓರ್ವ ವೀಕ್ಷಕನು ಅವನ ಬಳಿಯಿರುವ ಹೊರತು.”** (ಕುರ್‌ಆನ್ 50/17–18)

ಗೋರಿಯಲ್ಲಿ ದಫನ ಮಾಡಿದ ನಂತರ ಮೃತವ್ಯಕ್ತಿಯನ್ನು ಪ್ರಶ್ನಿಸುವ ಕೆಲಸವನ್ನು ವಹಿಸಿಕೊಡಲಾದ ಮಲಕ್‌ಗಳೂ ಇದ್ದಾರೆ. ಆಗ ಅವನ ಪ್ರಭು, ಧರ್ಮ ಮತ್ತು ಪ್ರವಾದಿಯ ಕುರಿತು ಪ್ರಶ್ನಿಸುವುದಕ್ಕಾಗಿ ಗೋರಿಯಲ್ಲಿ ಎರಡು ಮಲಕ್‌ಗಳು[29] ಅವನ ಬಳಿಗೆ ಬರುವರು. ಆಗ

﴿ يُثَبِّتُ ٱللَّهُ ٱلَّذِينَ ءَامَنُواْ بِٱلۡقَوۡلِ ٱلثَّابِتِ فِي ٱلۡحَيَوٰةِ ٱلدُّنۡيَا وَفِي ٱلۡأٓخِرَةِۖ وَيُضِلُّ ٱللَّهُ ٱلظَّٰلِمِينَۚ وَيَفۡعَلُ ٱللَّهُ مَا يَشَآءُ ٢٧ ﴾

**“ಅಲ್ಲಾಹು ವಿಶ್ವಾಸಿಗಳನ್ನು ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ದೃಢವಾದ ವಚನದಲ್ಲಿ ದೃಢವಾಗಿ ನೆಲೆಗೊಳಿಸುವನು ಮತ್ತು ಅಕ್ರಮಿಗಳನ್ನು ಅಲ್ಲಾಹು ಪಥಭ್ರಷ್ಟಗೊಳಿಸುವನು. ಅಲ್ಲಾಹು ಅವನಿಚ್ಛಿಸಿದ್ದನ್ನು ಮಾಡುತ್ತಾನೆ.”** (ಕುರ್‌ಆನ್ 14/27)

ಅವರ ಪೈಕಿ ಸ್ವರ್ಗವಾಸಿಗಳ ಕೆಲಸವನ್ನು ವಹಿಸಿಕೊಡಲಾದ ಮಲಕ್‌ಗಳೂ ಇದ್ದಾರೆ.

﴿ وَٱلۡمَلَٰٓئِكَةُ يَدۡخُلُونَ عَلَيۡهِم مِّن كُلِّ بَابٖ ٢٣ سَلَٰمٌ عَلَيۡكُم بِمَا صَبَرۡتُمۡۚ فَنِعۡمَ عُقۡبَى ٱلدَّارِ ٢٤ ﴾

**“ನೀವು ಸಹನೆ ವಹಿಸಿದ ಕಾರಣ ನಿಮ್ಮ ಮೇಲೆ ಶಾಂತಿಯಿರಲಿ. ನಿಮ್ಮ ಅಂತಿಮ ವಾಸಸ್ಥಳವು ಅದೆಷ್ಟು ಉತ್ತಮವಾಗಿದೆ ಎಂದು ಹೇಳುತ್ತಾ ಪ್ರತಿಯೊಂದು ದ್ವಾರದಿಂದಲೂ ಮಲಕ್‌ಗಳು ಅವರೆಡೆಗೆ ಪ್ರವೇಶಿಸುವರು.”** (ಕುರ್‌ಆನ್ 13/23–24)

ಪ್ರವಾದಿ(ﷺ)ರವರು ನಮಗೆ ತಿಳಿಸಿಕೊಟ್ಟಿರುವಂತೆ ಆಕಾಶದಲ್ಲಿರುವ ಬೈತುಲ್

---

**29**. ತಿರ್ಮಿದಿ ಉದ್ಧರಿಸಿದ ಹದೀಸಿನಲ್ಲಿ (3/383; ಹದೀಸ್ ನಂ. 1071) ಈ ಎರಡು ಮಲಕ್‌ಗಳ ಹೆಸರು ಮುನ್ಕರ್ ಮತ್ತು ನಕೀರ್ ಎಂದಿದೆ. ಶೈಖ್ ಅಲ್ಬಾನೀ ತನ್ನ ಸಿಲ್ಸಿಲತು ಸ್ಸಹೀಹಃದಲ್ಲಿ (3/380; ಹದೀಸ್ ನಂ. 1391) ಈ ಹದೀಸನ್ನು ಹಸನ್ ಎಂದಿದ್ದಾರೆ.

**ಸೂಚನೆ:** ಕುರ್‌ಆನ್ ಮತ್ತು ಸುನ್ನತ್‌ನಲ್ಲಿ ಸ್ಪಷ್ಟವಾಗಿ ಹೇಳಲಾಗಿರುವ ಪ್ರಕಾರ ಮಲಕ್‌ಗಳು ಭೌತಿಕ ಅಸ್ತಿತ್ವವನ್ನು ಹೊಂದಿದ್ದಾರೆ. ಅವರು ಕೇವಲ ಭಾವನಾತ್ಮಕ ಶಕ್ತಿಗಳಲ್ಲ. ಇದರ ಕುರಿತು ಶೈಖ್ ಉಸೈಮೀನ್‌ರವರು ತನ್ನ ‘ಶರ್ಹು ಉಸೂಲಿ ಸ್ಸಲಾಸಃ’ದಲ್ಲಿ (ಪುಟ 93) ಹೀಗೆಂದಿದ್ದಾರೆ: ‘ಮಲಕ್‌ಗಳಿಗೆ ಭೌತಿಕ ಅಸ್ತಿತ್ವವಿದೆಯೆಂಬುದನ್ನು ಕೆಲವು ದುರ್ಮಾರ್ಗಿಗಳು ನಿರಾಕರಿಸುತ್ತಾರೆ. ಅವರು ವಾದಿಸುವ ಪ್ರಕಾರ ಮಲಕ್‌ಗಳು ಎಂದರೆ ಸೃಷ್ಟಿಗಳಲ್ಲಿ ಅಡಗಿರುವ ಒಳಿತಿನ ಶಕ್ತಿಯ ಪ್ರತೀಕಗಳಾಗಿವೆ. ಈ ವಾದವು ಅಲ್ಲಾಹನ ಗ್ರಂಥ, ಅವನ ಸಂದೇಶವಾಹಕ(ﷺ)ರವರ ಸುನ್ನತ್ ಮತ್ತು ವಿದ್ವಾಂಸರ ಏಕಾಭಿಪ್ರಾಯವನ್ನು ತಿರಸ್ಕರಿಸುವ ವಾದವಾಗಿದೆ.’

ಮಅ್‌ಮೂರ್‌ನ್ನು[30] ಪ್ರತಿದಿನ ಎಪ್ಪತ್ತು ಸಾವಿರ ಮಲಕ್‌ಗಳು ಪ್ರವೇಶಿಸುವರು (ಇನ್ನೊಂದು ವರದಿಯಲ್ಲಿ: ನಮಾಝ್ ಮಾಡುವರು). ಅವರು ಮತ್ತೆ ಅಲ್ಲಿಗೆ ಮರಳುವುದಿಲ್ಲ. ಅದು ಅವರ ಪಾಲಿಗೆ ಕೊನೆಯದಾಗಿರುವುದು.[31]

**30**. ಇಬ್ನ್ ಜರೀರ್ ಅತ್ತಬರೀ ತನ್ನ 'ತಫ್ಸೀರ್'ನಲ್ಲಿ (11/27) ಉದ್ಧರಿಸಿದ ವರದಿಯೊಂದರಲ್ಲಿ ಅಲೀ(ﷺ) ರವರು ಬೈತುಲ್ ಮಅ್‌ಮೂರ್‌ನ ಕುರಿತು ಹೀಗೆಂದಿದ್ದಾರೆ: 'ಅದು ಕಅ್‌ಬಾಲಯಕ್ಕೆ ನೇರ ಮೇಲ್ಭಾಗದಲ್ಲಿ ಆಕಾಶಗಳಲ್ಲಿರುವ ಭವನವಾಗಿದೆ. ಭೂಮಿಯಲ್ಲಿ ಕಅ್‌ಬಾಲಯವನ್ನು ಪವಿತ್ರಗೊಳಿಸಿರುವಂತೆ ಆಕಾಶದಲ್ಲಿ ಅದನ್ನು ಪವಿತ್ರಗೊಳಿಸಲಾಗಿದೆ.' ನೋಡಿ: 'ಸಿಲ್ಸಿಲತು ಸ್ಸಹೀಹಃ' (1/778; ಹದೀಸ್ ನಂ. 477).

**31**. ನೋಡಿ: 'ಸಹೀಹುಲ್ ಬುಖಾರಿ' (3/1173; ಹದೀಸ್ ನಂ. 3035) ಮತ್ತು 'ಸಹೀಹ್ ಮುಸ್ಲಿಮ್' (1/145; ಹದೀಸ್ ನಂ. 162).

# الإيمان بالكتب

## ಗ್ರಂಥಗಳಲ್ಲಿರುವ ವಿಶ್ವಾಸ

ಮಾನವಕುಲದ ಮೇಲೆ ಒಂದು ಪುರಾವೆಯಾಗಿ ಮತ್ತು ಕರ್ಮವೆಸಗುವವರಿಗೆ ಒಂದು ದಾರಿದೀಪವಾಗಿ ಅಲ್ಲಾಹು ತನ್ನ ಪ್ರವಾದಿಗಳಿಗೆ ತನ್ಮೂಲಕ ಅವರು ಜನರಿಗೆ ಯುಕ್ತಿಯನ್ನು ಕಲಿಸಿಕೊಡಲು ಮತ್ತು ಅವರನ್ನು ಶುದ್ಧೀಕರಿಸಲು ಗ್ರಂಥಗಳನ್ನು ಇಳಿಸಿಕೊಟ್ಟನು ಎಂದು ನಾವು ವಿಶ್ವಾಸವಿಡುತ್ತೇವೆ.

ಅಲ್ಲಾಹು ಪ್ರತಿಯೊಬ್ಬ ಸಂದೇಶವಾಹಕನಿಗೂ ಗ್ರಂಥವನ್ನು ಅವತೀರ್ಣಗೊಳಿಸಿದ್ದಾನೆ ಎಂದು ನಾವು ವಿಶ್ವಾಸವಿಡುತ್ತೇವೆ. ಯಾಕೆಂದರೆ ಅಲ್ಲಾಹು ಹೇಳಿದ್ದಾನೆ:

﴿لَقَدۡ أَرۡسَلۡنَا رُسُلَنَا بِٱلۡبَيِّنَٰتِ وَأَنزَلۡنَا مَعَهُمُ ٱلۡكِتَٰبَ وَٱلۡمِيزَانَ لِيَقُومَ ٱلنَّاسُ بِٱلۡقِسۡطِۖ﴾

**“ಖಂಡಿತವಾಗಿಯೂ ನಾವು ನಮ್ಮ ಸಂದೇಶವಾಹಕರನ್ನು ಸ್ಪಷ್ಟವಾದ ಪುರಾವೆಗಳೊಂದಿಗೆ ನಿಯೋಗಿಸಿದ್ದೇವೆ. ಮತ್ತು ಅವರೊಂದಿಗೆ ಗ್ರಂಥವನ್ನೂ ತಕ್ಕಡಿಯನ್ನೂ ಅವತೀರ್ಣಗೊಳಿಸಿದ್ದೇವೆ. ಜನರು ನ್ಯಾಯವನ್ನು ಎತ್ತಿಹಿಡಿಯುವ ಸಲುವಾಗಿ.”** (ಕುರ್‌ಆನ್ 57/25)

ಆ ಗ್ರಂಥಗಳ ಪೈಕಿ ನಮಗೆ ತಿಳಿದಿರುವುದು:

1. ತೌರಾತ್: ಇದು ಅಲ್ಲಾಹು ಮೂಸಾ(عليه السلام)ರವರ ಮೇಲೆ ಅವತೀರ್ಣಗೊಳಿಸಿದ ಗ್ರಂಥವಾಗಿದೆ. ಇದು ಬನೀ ಇಸ್ರಾಈಲರಿಗೆ ಅವತೀರ್ಣಗೊಂಡ ಅತಿದೊಡ್ಡ ಗ್ರಂಥವಾಗಿದೆ.

﴿فِيهَا هُدٗى وَنُورٞۚ يَحۡكُمُ بِهَا ٱلنَّبِيُّونَ ٱلَّذِينَ أَسۡلَمُواْ لِلَّذِينَ هَادُواْ وَٱلرَّبَّٰنِيُّونَ وَٱلۡأَحۡبَارُ بِمَا ٱسۡتُحۡفِظُواْ مِن كِتَٰبِ ٱللَّهِ وَكَانُواْ عَلَيۡهِ شُهَدَآءَۚ﴾

**“ಅದರಲ್ಲಿ ಮಾರ್ಗದರ್ಶನ ಮತ್ತು ಪ್ರಕಾಶವಿತ್ತು. ಅಲ್ಲಾಹನಿಗೆ ತಮ್ಮನ್ನು ಸಮರ್ಪಿಸಿಕೊಂಡ ಪ್ರವಾದಿಗಳು ತನ್ಮೂಲಕ ಯಹೂದರ ಮಧ್ಯೆ ವಿಧಿ ನೀಡುತ್ತಿದ್ದರು. ರಬ್ಬಾನಿಗಳು ಮತ್ತು ಪುರೋಹಿತರು ಕೂಡ ಹಾಗೆಯೇ ಮಾಡುತ್ತಿದ್ದರು. ಅಲ್ಲಾಹನ ಗ್ರಂಥವನ್ನು ಸಂರಕ್ಷಿಸುವ ಹೊಣೆಯನ್ನು ಅವರಿಗೆ ನೀಡಲಾಗಿತ್ತು ಮತ್ತು ಅವರದಕ್ಕೆ ಸಾಕ್ಷಿಗಳೂ ಆಗಿದ್ದರು.”** (ಕುರ್‌ಆನ್ 5/44)

2. ಇಂಜೀಲ್: ಇದು ಅಲ್ಲಾಹು ಈಸಾ(عليه السلام)ರವರ ಮೇಲೆ ಅವತೀರ್ಣಗೊಳಿಸಿದ

ಗ್ರಂಥವಾಗಿದೆ. ಇದು ತೌರಾತ್‌ನ ದೃಢೀಕರಣವೂ ಅದರ ಪೂರ್ತೀಕರಣವೂ ಆಗಿದೆ.

﴿ وَءَاتَيْنَٰهُ ٱلْإِنجِيلَ فِيهِ هُدًى وَنُورٌ وَمُصَدِّقًا لِّمَا بَيْنَ يَدَيْهِ مِنَ ٱلتَّوْرَىٰةِ وَهُدًى وَمَوْعِظَةً لِّلْمُتَّقِينَ ﴿٤٦﴾ ﴾

**“ನಾವು ಅವನಿಗೆ ಇಂಜೀಲನ್ನು ನೀಡಿದೆವು. ಅದರಲ್ಲಿ ಮಾರ್ಗದರ್ಶನ ಮತ್ತು ಪ್ರಕಾಶವಿತ್ತು. ಮತ್ತು ಅದಕ್ಕಿಂತ ಮುಂಚೆ ಅವತೀರ್ಣಗೊಂಡ ತೌರಾತ್‌ಗೆ ಅದೊಂದು ದೃಢೀಕರಣವಾಗಿತ್ತು. ಭಯಭಕ್ತಿ ಪಾಲಿಸುವವರಿಗೆ ಅದೊಂದು ಮಾರ್ಗದರ್ಶನ ಮತ್ತು ಉಪದೇಶವಾಗಿತ್ತು.”** (ಕುರ್‌ಆನ್ 5/46)

﴿ وَلِأُحِلَّ لَكُم بَعْضَ ٱلَّذِى حُرِّمَ عَلَيْكُمْ ﴾

**“ನಿಮಗೆ ನಿಷಿದ್ಧಗೊಳಿಸಲಾಗಿರುವ ಕೆಲವನ್ನು ನಾನು ನಿಮಗೆ ಧರ್ಮಸಮ್ಮತಗೊಳಿಸುವ ಸಲುವಾಗಿ.”** (ಕುರ್‌ಆನ್ 3/50)

3. ಝುಬೂರ್: ಇದು ಅಲ್ಲಾಹು ದಾವೂದ್(عليه السلام)ರವರಿಗೆ ನೀಡಿದ ಗ್ರಂಥವಾಗಿದೆ[32].

4. ಇಬ್ರಾಹೀಮ್(عليه السلام) ಮತ್ತು ಮೂಸಾ (عليه السلام)ರಿಗೆ ನೀಡಲಾದ ಸಹೀಫಗಳು.

5. ಅತಿಮಹತ್ತಾದ ಕುರ್‌ಆನ್: ಇದು ಅಲ್ಲಾಹು ಪ್ರವಾದಿಗಳ ಪೈಕಿ ಕೊನೆಯವರಾದ ಪ್ರವಾದಿ ಮುಹಮ್ಮದ್(ﷺ)ರವರ ಮೇಲೆ

﴿ هُدًى لِّلنَّاسِ وَبَيِّنَٰتٍ مِّنَ ٱلْهُدَىٰ وَٱلْفُرْقَانِ ﴾

**“ಜನರಿಗೊಂದು ಮಾರ್ಗದರ್ಶನವಾಗಿ ಮತ್ತು ಮಾರ್ಗದರ್ಶನದ ಹಾಗೂ ಸತ್ಯಾಸತ್ಯ ವಿವೇಚನೆಯ ಪುರಾವೆಗಳೊಂದಿಗೆ.”** (ಕುರ್‌ಆನ್ 2/185) ಅವತೀರ್ಣಗೊಳಿಸಿದ ಗ್ರಂಥವಾಗಿದೆ.

﴿ مُصَدِّقًا لِّمَا بَيْنَ يَدَيْهِ مِنَ ٱلْكِتَٰبِ وَمُهَيْمِنًا عَلَيْهِ ﴾

**“ಅದಕ್ಕಿಂತ ಮುಂಚೆ ಅವತೀರ್ಣಗೊಂಡ ಗ್ರಂಥಗಳ ದೃಢೀಕರಣವಾಗಿ ಮತ್ತು ಅವುಗಳ ಮೇಲ್ನೋಟವನ್ನು[33] ವಹಿಸುವ ಸಲುವಾಗಿ.”** (ಕುರ್‌ಆನ್ 5/48)

---

**32**. ಇಂದು ಅಸ್ತಿತ್ವದಲ್ಲಿರುವ ಬೈಬಲ್‌ನ ಹಳೆಯ ಒಡಂಬಡಿಕೆಯ ಮೊದಲ ಐದು ಪುಸ್ತಕಗಳನ್ನು ತೌರಾತ್ ಎನ್ನಲಾಗುತ್ತದೆ, ಹಳೆಯ ಒಡಂಬಡಿಕೆಯ ಕೀರ್ತನೆಗಳು ಎಂಬ ಪುಸ್ತಕವನ್ನು ಝುಬೂರ್ ಎನ್ನಲಾಗುತ್ತದೆ ಮತ್ತು ಹೊಸ ಒಡಂಬಡಿಕೆಯ ನಾಲ್ಕು ಸುವಾರ್ತೆಗಳನ್ನು ಇಂಜೀಲ್ ಎನ್ನಲಾಗುತ್ತದೆ. ಆದರೆ ಇವುಗಳಲ್ಲಿ ಸಾಕಷ್ಟು ಮಾನವ ಹಸ್ತಕ್ಷೇಪಗಳು ಉಂಟಾಗಿರುವುದರಿಂದ ಅವು ತಮ್ಮ ಮೂಲ ರೂಪದಲ್ಲಿ ಇಂದು ಅಸ್ತಿತ್ವದಲ್ಲಿಲ್ಲ. ಆದ್ದರಿಂದ ಯಾವ ಕಾರಣಕ್ಕೂ ಇವು ಅಲ್ಲಾಹು ಅವತೀರ್ಣಗೊಳಿಸಿದ ತೌರಾತ್, ಝುಬೂರ್ ಮತ್ತು ಇಂಜೀಲ್ ಎಂದು ಹೇಳಲಾಗದು.

**33**. ಶೈಖ್ ಉಸೈಮೀನ್‌ರವರು ತನ್ನ ‘ಮಜ್ಮೂಉ ಫತಾವಾ ವರಸಾಇಲ್’ನಲ್ಲಿ (5/120) ಹೇಳಿದ್ದಾರೆ: ‘ಇದರರ್ಥ ಕುರ್‌ಆನ್ ಅವುಗಳ (ಪೂರ್ವ ಗ್ರಂಥಗಳ) ಮೇಲೆ ನ್ಯಾಯಾಧೀಶನ ಸ್ಥಾನದಲ್ಲಿದೆ. ಆದ್ದ–

ಅದರ (ಕುರ್‌ಆನ್‌ನ) ಮೂಲಕ ಅಲ್ಲಾಹು ಎಲ್ಲ ಪೂರ್ವ ಗ್ರಂಥಗಳನ್ನು ರದ್ದುಗೊಳಿಸಿದನು ಮತ್ತು ತಿದ್ದುಪಡಿ ಮಾಡುವವರ ತಿದ್ದುಪಡಿಗಳಿಂದ ಹಾಗೂ ವಿರೂಪಗೊಳಿಸುವವರ ವಿರೂಪಗಳಿಂದ ಅದನ್ನು (ಕುರ್‌ಆನನ್ನು) ಸಂರಕ್ಷಿಸುವ ಹೊಣೆಯನ್ನು ಸ್ವಯಂ ಹೊತ್ತುಕೊಂಡನು.

﴿ إِنَّا نَحۡنُ نَزَّلۡنَا ٱلذِّكۡرَ وَإِنَّا لَهُۥ لَحَٰفِظُونَ ٩ ﴾

**“ಖಂಡಿತವಾಗಿಯೂ ಈ ದಿಕ್ರನ್ನು (ಕುರ್‌ಆನನ್ನು) ಅವತೀರ್ಣಗೊಳಿಸಿದ್ದು ನಾವಾಗಿದ್ದೇವೆ ಮತ್ತು ಖಂಡಿತವಾಗಿಯೂ ಇದನ್ನು ನಾವು ಸಂರಕ್ಷಿಸುವೆವು.”** (ಕುರ್‌ಆನ್ 15/9)

ಯಾಕೆಂದರೆ ಅದು ಅಂತ್ಯದಿನದವರೆಗೆ ಸಂಪೂರ್ಣ ಸೃಷ್ಟಿಗಳ ಮೇಲೆ ಪುರಾವೆಯಾಗಿ ಉಳಿಯಲಿದೆ.

ಪೂರ್ವ ಗ್ರಂಥಗಳ ಕುರಿತು ಹೇಳುವುದಾದರೆ ಅವುಗಳು ತಾತ್ಕಾಲಿಕವಾಗಿವೆ. ಅವುಗಳನ್ನು ರದ್ದುಗೊಳಿಸುವ ಮತ್ತು ಅವುಗಳಲ್ಲುಂಟಾದ ತಿದ್ದುಪಡಿ ಹಾಗೂ ಬದಲಾವಣೆಗಳನ್ನು ಸ್ಪಷ್ಟಪಡಿಸುವ ಗ್ರಂಥವು ಅವತೀರ್ಣವಾದೊಡನೆ ಅವುಗಳ ಅವಧಿಯು ಕೊನೆಗೊಳ್ಳುತ್ತಿತ್ತು. ಆದ್ದರಿಂದಲೇ ಅವುಗಳ ಸುರಕ್ಷಿತತೆಯನ್ನು ಅಲ್ಲಾಹು ವಹಿಸಿಕೊಂಡಿಲ್ಲ. ಅವುಗಳಲ್ಲಿ (ಪೂರ್ವ ಗ್ರಂಥಗಳಲ್ಲಿ) ಬದಲಾವಣೆಗಳು, ಹೆಚ್ಚುವರಿಗಳು ಮತ್ತು ಕಡಿತಗಳು ಖಂಡಿತವಾಗಿಯೂ ಉಂಟಾಗಿವೆ.

﴿ مِّنَ ٱلَّذِينَ هَادُواْ يُحَرِّفُونَ ٱلۡكَلِمَ عَن مَّوَاضِعِهِۦ ﴾

**“ವಚನಗಳನ್ನು ಅದರ ಸ್ಥಾನದಿಂದ ಬದಲಾವಣೆಗೊಳಿಸುವವರು ಯಹೂದರ ಪೈಕಿ ಇದ್ದಾರೆ.”** (ಕುರ್‌ಆನ್ 4/46)

﴿ فَوَيۡلٌ لِّلَّذِينَ يَكۡتُبُونَ ٱلۡكِتَٰبَ بِأَيۡدِيهِمۡ ثُمَّ يَقُولُونَ هَٰذَا مِنۡ عِندِ ٱللَّهِ لِيَشۡتَرُواْ بِهِۦ ثَمَنٗا قَلِيلٗاۖ فَوَيۡلٌ لَّهُم مِّمَّا كَتَبَتۡ أَيۡدِيهِمۡ وَوَيۡلٌ لَّهُم مِّمَّا يَكۡسِبُونَ ٧٩ ﴾

**“ಆದ್ದರಿಂದ ತಮ್ಮ ಕೈಗಳ ಮೂಲಕ ಗ್ರಂಥವನ್ನು ಬರೆದು ನಂತರ ಇದು ಅಲ್ಲಾಹನ ವತಿಯಿಂದಾಗಿದೆ ಎಂದು ಹೇಳುವ ಮೂಲಕ ಅದರಿಂದ ತುಚ್ಛವಾದ ಬೆಲೆಯನ್ನು ಪಡೆಯುವವರಿಗೆ ನಾಶವಿದೆ. ಅವರ ಕೈಗಳು ಬರೆದಿಟ್ಟ ಕಾರಣದಿಂದಾಗಿ ಅವರಿಗೆ ನಾಶವಿದೆ ಮತ್ತು ಅವರು ಸಂಪಾದಿಸಿದ್ದರ ಕಾರಣದಿಂದಾಗಿಯೂ ಅವರಿಗೆ ನಾಶವಿದೆ.”** (ಕುರ್‌ಆನ್

---

ರಿಂದ ಪೂರ್ವ ಗ್ರಂಥಗಳಲ್ಲಿರುವ ಯಾವುದೇ ವಿಧಿಯ ಪ್ರಕಾರವೂ ಕರ್ಮವೆಸಗಕೂಡದು, ಆ ವಿಧಿಯು ಸರಿಯಾಗಿರುವ ಮತ್ತು ಅದನ್ನು ಕುರ್‌ಆನ್ ದೃಢೀಕರಿಸಿರುವ ಹೊರತು.’

ಹಾಫಿದ್ ಇಬ್ನ್ ಕಸೀರ್ ತನ್ನ ‘ತಫ್ಸೀರ್’ನಲ್ಲಿ (2/66) ಹೇಳಿದ್ದಾರೆ: ‘ಇಬ್ನ್ ಜುರೈಜ್ ಹೇಳಿದರು: ಕುರ್‌ಆನ್ ಪೂರ್ವ ಗ್ರಂಥಗಳ ಮೇಲೆ ವಿಶ್ವಸ್ಥನ ಸ್ಥಾನದಲ್ಲಿದೆ. ಆದ್ದರಿಂದ ಅವುಗಳ ಪೈಕಿ ಕುರ್‌ಆನಿಗೆ ಹೊಂದಾಣಿಕೆಯಾಗುವ ಎಲ್ಲವೂ ಸತ್ಯವಾಗಿದೆ ಮತ್ತು ಕುರ್‌ಆನಿಗೆ ವಿರುದ್ಧವಾಗಿರುವ ಎಲ್ಲವೂ ಮಿಥ್ಯವಾಗಿದೆ.’

2/79)

﴿ قُلْ مَنْ أَنزَلَ ٱلْكِتَٰبَ ٱلَّذِى جَآءَ بِهِۦ مُوسَىٰ نُورًا وَهُدًى لِّلنَّاسِ ۖ تَجْعَلُونَهُۥ قَرَاطِيسَ تُبْدُونَهَا وَتُخْفُونَ كَثِيرًا ۖ ﴾

"(ಓ ಪ್ರವಾದಿ!) ಕೇಳು: ಜನರಿಗೆ ಪ್ರಕಾಶ ಮತ್ತು ಮಾರ್ಗದರ್ಶನವಾಗಿ ಮೂಸಾ ತಂದ ಗ್ರಂಥವನ್ನು ಅವತೀರ್ಣಗೊಳಿಸಿದ್ದು ಯಾರು? ನೀವದನ್ನು ಹಾಳೆಗಳಲ್ಲಿ ಮಾಡಿಡುತ್ತೀರಿ. ಅವುಗಳನ್ನು ಬಹಿರಂಗಗೊಳಿಸುತ್ತೀರಿ. ಆದರೆ ಹೆಚ್ಚಿನವುಗಳನ್ನೂ ನೀವು ಬಚ್ಚಿಡುತ್ತೀರಿ." (ಕುರ್‌ಆನ್ 6/91)

﴿ وَإِنَّ مِنْهُمْ لَفَرِيقًا يَلْوُۥنَ أَلْسِنَتَهُم بِٱلْكِتَٰبِ لِتَحْسَبُوهُ مِنَ ٱلْكِتَٰبِ وَمَا هُوَ مِنَ ٱلْكِتَٰبِ وَيَقُولُونَ هُوَ مِنْ عِندِ ٱللَّهِ وَمَا هُوَ مِنْ عِندِ ٱللَّهِ وَيَقُولُونَ عَلَى ٱللَّهِ ٱلْكَذِبَ وَهُمْ يَعْلَمُونَ ﴿٧٨﴾ مَا كَانَ لِبَشَرٍ أَن يُؤْتِيَهُ ٱللَّهُ ٱلْكِتَٰبَ وَٱلْحُكْمَ وَٱلنُّبُوَّةَ ثُمَّ يَقُولَ لِلنَّاسِ كُونُوا۟ عِبَادًا لِّى مِن دُونِ ٱللَّهِ ﴾

"ತಮ್ಮ ನಾಲಗೆಯ ಮೂಲಕ ಗ್ರಂಥವನ್ನು ತಿರುಚುವ ಒಂದು ಪಂಗಡವು ಅವರ ಪೈಕಿ ಇದೆ. ಅದು ಗ್ರಂಥದಲ್ಲಿ ಸೇರಿದ್ದಾಗಿದೆಯೆಂದು ನೀವು ಭಾವಿಸುವ ಸಲುವಾಗಿ. ಆದರೆ ಅದು ಗ್ರಂಥದಲ್ಲಿ ಸೇರಿದ್ದಲ್ಲ. ಅವರು ಹೇಳುವರು: ಇದು ಅಲ್ಲಾಹನ ವತಿಯಿಂದಾಗಿದೆ. ಆದರೆ ಅದು ಅಲ್ಲಾಹನ ವತಿಯಿಂದಲ್ಲ. ಅವರು ತಿಳಿದೂ ಕೂಡ ಅಲ್ಲಾಹನ ಮೇಲೆ ಸುಳ್ಳು ಹೇಳುತ್ತಿದ್ದಾರೆ. ಯಾರಾದರೂ ಓರ್ವ ವ್ಯಕ್ತಿಗೆ ಅಲ್ಲಾಹು ಗ್ರಂಥವನ್ನು, ಜ್ಞಾನವನ್ನು ಮತ್ತು ಪ್ರವಾದಿತ್ವವನ್ನು ನೀಡಿದ ಬಳಿಕ ನೀವು ಅಲ್ಲಾಹನ ಹೊರತು ನನ್ನ ದಾಸರಾಗಿರಿ ಎಂದು ಹೇಳುವುದು ಸಾಧ್ಯವಿಲ್ಲ." (ಕುರ್‌ಆನ್ 3/78–79)

﴿ يَٰٓأَهْلَ ٱلْكِتَٰبِ قَدْ جَآءَكُمْ رَسُولُنَا يُبَيِّنُ لَكُمْ كَثِيرًا مِّمَّا كُنتُمْ تُخْفُونَ مِنَ ٱلْكِتَٰبِ وَيَعْفُوا۟ عَن كَثِيرٍ ۚ قَدْ جَآءَكُم مِّنَ ٱللَّهِ نُورٌ وَكِتَٰبٌ مُّبِينٌ ﴿١٥﴾ يَهْدِى بِهِ ٱللَّهُ مَنِ ٱتَّبَعَ رِضْوَٰنَهُۥ سُبُلَ ٱلسَّلَٰمِ وَيُخْرِجُهُم مِّنَ ٱلظُّلُمَٰتِ إِلَى ٱلنُّورِ بِإِذْنِهِۦ وَيَهْدِيهِمْ إِلَىٰ صِرَٰطٍ مُّسْتَقِيمٍ ﴿١٦﴾ لَّقَدْ كَفَرَ ٱلَّذِينَ قَالُوٓا۟ إِنَّ ٱللَّهَ هُوَ ٱلْمَسِيحُ ٱبْنُ مَرْيَمَ ۚ ﴾

"ಓ ಗ್ರಂಥದವರೇ! ನೀವು ಗ್ರಂಥದಿಂದ ಮುಚ್ಚಿಡುತ್ತಿದ್ದ ಅನೇಕ ವಿಷಯಗಳನ್ನು

**ನಿಮಗೆ ವಿವರಿಸುವ ಮತ್ತು ಅನೇಕ ವಿಷಯಗಳ ಕುರಿತು ಕ್ಷಮಿಸುವ ಸಲುವಾಗಿ ನಮ್ಮ ಸಂದೇಶವಾಹಕನು ನಿಮ್ಮೆಡೆಗೆ ಆಗಮಿಸಿದ್ದಾನೆ. ಖಂಡಿತವಾಗಿಯೂ ನಿಮಗೆ ಅಲ್ಲಾಹನ ವತಿಯಿಂದ ಒಂದು ಪ್ರಕಾಶ ಮತ್ತು ಸ್ಪಷ್ಟವಾದ ಒಂದು ಗ್ರಂಥವು ಬಂದುಬಿಟ್ಟಿದೆ.**[34] **ತನ್ನ ತೃಪ್ತಿಯನ್ನು ಅನುಸರಿಸಿದವನನ್ನು ಅಲ್ಲಾಹು ತನ್ಮೂಲಕ ಶಾಂತಿಯ ಮಾರ್ಗಗಳತ್ತ ಮುನ್ನಡೆಸುವನು ಮತ್ತು ಅವರನ್ನು ತನ್ನ ಅನುಮತಿಯೊಂದಿಗೆ ಅಂಧಕಾರಗಳಿಂದ ಬೆಳಕಿನತ್ತ ಹೊರತರುವನು. ಹಾಗೂ ಅವರನ್ನು ನೇರವಾದ ಮಾರ್ಗದತ್ತ ಮುನ್ನಡೆಸುವನು. ಅಲ್ಲಾಹು ಎಂದರೆ ಅದು ಮಸೀಹ್ ಇಬ್ನ್ ಮರ್ಯಮ್ ಆಗಿದ್ದಾನೆ ಎಂದು ಹೇಳಿದವರು ಯಾರೋ ಅವರು ಖಂಡಿತವಾಗಿಯೂ ಅವಿಶ್ವಾಸಿಗಳಾಗಿದ್ದಾರೆ.”** (ಕುರ್‌ಆನ್ 5/15–17)

---

**34**. ‘ನಿಮಗೆ ಅಲ್ಲಾಹನ ವತಿಯಿಂದ ಒಂದು ಪ್ರಕಾಶ ಮತ್ತು ಸ್ಪಷ್ಟವಾದ ಒಂದು ಗ್ರಂಥವು ಬಂದುಬಿಟ್ಟಿದೆ’ ಎಂದು ವಚನವನ್ನು ವ್ಯಾಖ್ಯಾನಿಸುತ್ತಾ ಇಬ್ನ್ ಜರೀರ್ ಅತ್ತಬರೀ ತನ್ನ ‘ತಫ್ಸೀರ್’ನಲ್ಲಿ (6/161) ಹೇಳಿದ್ದಾರೆ: ‘ಇಲ್ಲಿ ಪ್ರಕಾಶ ಎಂದರೆ ಪ್ರವಾದಿ ಮುಹಮ್ಮದ್(ﷺ)ರವರಾಗಿದ್ದಾರೆ. ಅವರ ಮೂಲಕ ಅಲ್ಲಾಹು ಸತ್ಯವನ್ನು ಬೆಳಗಿಸಿದನು, ಇಸ್ಲಾಮನ್ನು ಪ್ರಕಟಗೊಳಿಸಿದನು ಮತ್ತು ಶಿರ್ಕ್ (ಬಹುದೇವವಿಶ್ವಾಸ) ವನ್ನು ಅಳಿಸಿಹಾಕಿದನು. ಬೆಳಕನ್ನು ಬಯಸುವ ಎಲ್ಲರಿಗೂ ಅವರು ಸತ್ಯವನ್ನು ವ್ಯಕ್ತಗೊಳಿಸಿಕೊಡುವ ಪ್ರಕಾಶವಾಗಿದ್ದಾರೆ. ಯಹೂದರು ತಮ್ಮ ಗ್ರಂಥಗಳಿಂದ ಮುಚ್ಚಿಡುತ್ತಿದ್ದ ಅನೇಕ ವಿಷಯಗಳನ್ನು ಅವರಿಗೆ ವ್ಯಕ್ತಗೊಳಿಸಿಕೊಟ್ಟಿರುವುದು ಕೂಡ ಅವರ ಈ ಸತ್ಯವನ್ನು ಬೆಳಗಿಸುವುದರಲ್ಲಿ ಸೇರಿದ್ದಾಗಿದೆ.’

**ಸೂಚನೆ:** ಪ್ರವಾದಿ(ﷺ)ರವರು ಮಾರ್ಗದರ್ಶನ ನೀಡುವ ಪ್ರಕಾಶವಾಗಿದ್ದಾರೆ ಎಂದರೆ ಅವರಲ್ಲಿ ದೈವಿಕ ಗುಣಗಳಿವೆ ಮತ್ತು ಅವರು ಮನುಷ್ಯರಾಗಿದ್ದಾರೆ ಎಂಬುದಕ್ಕೆ ಇದು ವಿರುದ್ಧವಾಗಿದೆ ಎಂದರ್ಥವಲ್ಲ. ಮೊಟ್ಟಮೊದಲು ಸೃಷ್ಟಿಸಲಾದ ವಸ್ತು ಯಾವುದು ಎಂದು ಪ್ರವಾದಿ(ﷺ)ರವರೊಂದಿಗೆ ವಿಚಾರಿಸಲಾದಾಗ, ‘ಓ ಜಾಬಿರ್! ನಿನ್ನ ಪ್ರವಾದಿಯ ಪ್ರಕಾಶವನ್ನಾಗಿದೆ. ತರುವಾಯ ಎಲ್ಲ ಸೃಷ್ಟಿಗಳನ್ನೂ ಸೃಷ್ಟಿಸಲಾಯಿತು’ ಎಂಬ ಹದೀಸಿನ ಕುರಿತು ಹೇಳುವುದಾದರೆ ಅದೊಂದು ಕೃತಕ (ಮೌದೂಅ್) ಹದೀಸ್ ಆಗಿದೆ. ಹಾಫಿದ್ ಅಸ್ಸುಯೂತೀ ತನ್ನ ‘ಅಲ್‌ಹಾವೀ ಲಿಲ್‌ಫತಾವಾ’ದಲ್ಲಿ (1/500) ಹೇಳಿದಂತೆ ಈ ಹದೀಸನ್ನು ದೃಢೀಕರಿಸುವ ಯಾವ ಸನದ್ ಕೂಡ ಲಭ್ಯವಿಲ್ಲ.

# الإيمان بالرسل
## ಸಂದೇಶವಾಹಕರುಗಳಲ್ಲಿರುವ ವಿಶ್ವಾಸ

ಅಲ್ಲಾಹು ತನ್ನ ಸೃಷ್ಟಿಗಳೆಡೆಗೆ

﴿ رُّسُلًا مُّبَشِّرِينَ وَمُنذِرِينَ لِئَلَّا يَكُونَ لِلنَّاسِ عَلَى ٱللَّهِ حُجَّةُۢ بَعْدَ ٱلرُّسُلِۚ وَكَانَ ٱللَّهُ عَزِيزًا حَكِيمًا ١٦٥ ﴾

**“ಸಂದೇಶವಾಹಕರನ್ನು, ಶುಭವಾರ್ತೆ ನೀಡುವವರಾಗಿ ಮತ್ತು ಮುನ್ನೆಚ್ಚರಿಕೆ ನೀಡುವವರಾಗಿ, ಸಂದೇಶವಾಹಕರ ನಿಯೋಗದ ನಂತರ ಜನರಿಗೆ ಅಲ್ಲಾಹನ ವಿರುದ್ಧ ಯಾವುದೇ ಪುರಾವೆಯೂ ಇಲ್ಲದಿರುವ ಸಲುವಾಗಿ (ಅಲ್ಲಾಹು ಅವರನ್ನು ನಿಯೋಗಿಸಿದ್ದಾನೆ). ಅಲ್ಲಾಹು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿದ್ದಾನೆ.”** (ಕುರ್‌ಆನ್ 4/165) ಎಂದು ನಾವು ವಿಶ್ವಾಸವಿಡುತ್ತೇವೆ.

ಸಂದೇಶವಾಹಕರ (ರಸೂಲ್‌ಗಳ) ಪೈಕಿ ಮೊಟ್ಟಮೊದಲಿನವರು ನೂಹ್ (ﷺ)[35] ಮತ್ತು ಕಟ್ಟಕಡೆಯವರು ಮುಹಮ್ಮದ್(ﷺ)ರವರಾಗಿದ್ದಾರೆಂದು ನಾವು ವಿಶ್ವಾಸವಿಡುತ್ತೇವೆ.[36]

---

35. ಶಫಾಅತ್ತಿನ ಕುರಿತು ವಿವರಿಸಲಾಗುವ ಹದೀಸಿನಲ್ಲಿ ನೂಹ್(ﷺ)ರವರು ಮೊಟ್ಟಮೊದಲ ಸಂದೇಶವಾಹಕರಾಗಿದ್ದಾರೆ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಈ ಹದೀಸನ್ನು ಬುಖಾರಿ ತನ್ನ ‘ಸಹೀಹ್’ನಲ್ಲಿ (3/1215; ಹದೀಸ್ ನಂ. 3162) ಮತ್ತು ಮುಸ್ಲಿಮ್ ತನ್ನ ‘ಸಹೀಹ್’ನಲ್ಲಿ (1/184; ಹದೀಸ್ ನಂ. 194) ವರದಿ ಮಾಡಿದ್ದಾರೆ. ಆದಮ್(ﷺ)ರವರ ಕುರಿತು ಹೇಳುವುದಾದರೆ ಅವರೊಬ್ಬ ಪ್ರವಾದಿಯಾಗಿದ್ದರೇ ಹೊರತು ಸಂದೇಶವಾಹಕರಾಗಿರಲಿಲ್ಲ. ನೋಡಿ: ಶೈಖ್ ಉಸೈಮೀನ್‌ರವರ ‘ಶರ್ಹು ಅಕೀದತಿ ತ್ತಹಾವಿಯ್ಯಃ’ (1/66).

**36**. ಪ್ರವಾದಿ (ನಬಿ) ಮತ್ತು ಸಂದೇಶವಾಹಕ (ರಸೂಲ್) ಎಂಬ ಎರಡು ಪದಗಳ ಮಧ್ಯೆಯಿರುವ ವ್ಯತ್ಯಾಸಗಳ ಕುರಿತು ವಿದ್ವಾಂಸರು ಅನೇಕ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅವುಗಳ ಪೈಕಿ ಶೈಖುಲ್ ಇಸ್ಲಾಮ್ ಇಬ್ನ್ ತೈಮಿಯ್ಯಃ ತನ್ನ ‘ಕಿತಾಬುನ್ನುಬುವ್ವಾತ್’ನಲ್ಲಿ (ಪುಟ 255) ವ್ಯಕ್ತಪಡಿಸಿದ ಅಭಿಪ್ರಾಯ ಹೀಗಿದೆ: ‘ಓರ್ವನಿಗೆ ಅಲ್ಲಾಹನಿಂದ ಮಾಹಿತಿ ನೀಡಲಾಗಿ ಅವನು ಆ ಮಾಹಿತಿಯನ್ನು ಜನರಿಗೆ ತಲುಪಿಸುವುದಾದರೆ ಅವನನ್ನು ಪ್ರವಾದಿ (ನಬಿ) ಎನ್ನಲಾಗುತ್ತದೆ. ಅಲ್ಲಾಹನ ವಿಧಿ ನಿಷೇಧಗಳನ್ನು ನಿಷೇಧಿಸಿದ ಜನತೆಯೆಡೆಗೆ ಅಲ್ಲಾಹನ ಸಂದೇಶಗಳನ್ನು ತಲುಪಿಸುವುದಕ್ಕಾಗಿ ನಿಯೋಗಿಸಲಾಗುವ ವ್ಯಕ್ತಿಯನ್ನು ಸಂದೇಶವಾಹಕ (ರಸೂಲ್) ಎನ್ನಲಾಗುತ್ತದೆ. ಆದರೆ ಆ ವ್ಯಕ್ತಿ ಹಿಂದಿನ ಶರೀಅತ್ತನ್ನೇ ಅನುಸರಿಸುವುದಾದರೆ ಮತ್ತು ನಿಷೇಧಿಸಿದ ಜನರಿಗೆ ಸ್ವತಃ ಯಾವ ಸಂದೇಶವನ್ನೂ ತಲುಪಿಸುವುದಿಲ್ಲವಾದರೆ ಅವನು ಪ್ರವಾದಿಯಾಗಿದ್ದಾನೆಯೇ ಹೊರತು ಸಂದೇಶವಾಹಕನಲ್ಲ.’ **ಸೂಚನೆ:** ಇದು ಮತ್ತು ಇದರಂತಿರುವ ಅಭಿಪ್ರಾಯಗಳು ಸೂಚಿಸುವ ಒಟ್ಟು ತಾತ್ಪರ್ಯವೇನೆಂದರೆ ಎಲ್ಲ ಸಂದೇಶವಾಹಕರೂ ಪ್ರವಾದಿಗಳಾಗಿದ್ದಾರೆ. ಆದರೆ ಎಲ್ಲ ಪ್ರವಾದಿಗಳೂ ಸಂದೇಶವಾಹಕರಲ್ಲ.

﴿ ۞ إِنَّآ أَوۡحَيۡنَآ إِلَيۡكَ كَمَآ أَوۡحَيۡنَآ إِلَىٰ نُوحٖ وَٱلنَّبِيِّـۧنَ مِنۢ بَعۡدِهِۦۚ ﴾

**“ನಾವು ನೂಹ್‌ಗೆ ಮತ್ತು ಅವನ ನಂತರದ ಪ್ರವಾದಿಗಳಿಗೆ ದಿವ್ಯಸಂದೇಶವನ್ನು ನೀಡಿ–ದಂತೆ ಖಂಡಿತವಾಗಿಯೂ ನಿನಗೂ ನೀಡಿದ್ದೇವೆ.”** (ಕುರ್‌ಆನ್ 4/162)

﴿ مَّا كَانَ مُحَمَّدٌ أَبَآ أَحَدٖ مِّن رِّجَالِكُمۡ وَلَٰكِن رَّسُولَ ٱللَّهِ وَخَاتَمَ ٱلنَّبِيِّـۧنَۗ ﴾

**“ಮುಹಮ್ಮದ್ ನಿಮ್ಮ ಪುರುಷರ ಪೈಕಿ ಯಾವೊಬ್ಬನ ತಂದೆಯೂ ಅಲ್ಲ. ಆದರೆ ಅಲ್ಲಾಹನ ಸಂದೇಶವಾಹಕ ಮತ್ತು ಪ್ರವಾದಿಗಳ ಮುದ್ರೆಯಾಗಿರುವನು.”** (ಕುರ್‌ಆನ್ 33/40)

ಅವರ ಪೈಕಿ ಅತ್ಯಂತ ಶ್ರೇಷ್ಠರಾಗಿರುವವರು ಮುಹಮ್ಮದ್(ﷺ), ನಂತರ ಇಬ್ರಾಹೀಮ್(عليه السلام), ನಂತರ ಮೂಸಾ(عليه السلام), ನಂತರ ನೂಹ್(عليه السلام), ನಂತರ ಈಸಾ ಇಬ್ನ್ ಮರ್ಯಮ್(عليه السلام) ಆಗಿದ್ದಾರೆ ಎಂದು ನಾವು ವಿಶ್ವಾಸವಿಡುತ್ತೇವೆ. ಅಲ್ಲಾಹನ ಈ ವಚನದಲ್ಲಿ ಅವರ ಕುರಿತು ವಿಶೇಷವಾಗಿ ಹೇಳಲಾಗಿದೆ.

﴿ وَإِذۡ أَخَذۡنَا مِنَ ٱلنَّبِيِّـۧنَ مِيثَٰقَهُمۡ وَمِنكَ وَمِن نُّوحٖ وَإِبۡرَٰهِيمَ وَمُوسَىٰ وَعِيسَى ٱبۡنِ مَرۡيَمَۖ وَأَخَذۡنَا مِنۡهُم مِّيثَٰقًا غَلِيظٗا ٧ ﴾

**“ನಾವು ಪ್ರವಾದಿಗಳಿಂದ ಕರಾರನ್ನು ಪಡೆದ ಸಂದರ್ಭ, ಮತ್ತು ನಿನ್ನಿಂದ, ನೂಹ್‌ನಿಂದ, ಇಬ್ರಾಹೀಮ್‌ನಿಂದ, ಮೂಸಾನಿಂದ, ಈಸಾ ಇಬ್ನ್ ಮರ್ಯಮ್‌ನಿಂದ. ನಾವು ಅವರಿಂದ ಪ್ರಬಲವಾದ ಕರಾರನ್ನು ಪಡೆದಿರುವೆವು.”** (ಕುರ್‌ಆನ್ 33/7)

ಶ್ರೇಷ್ಠತೆಯೊಂದಿಗೆ ವಿಶೇಷಗೊಳಿಸಲಾದ ಈ ಪ್ರವಾದಿಗಳಿಗೆ ನೀಡಲಾಗಿರುವ ಶರೀಅತ್‌ಗಳಲ್ಲಿರುವ ಎಲ್ಲ ವಿಧದ ಶ್ರೇಷ್ಠತೆಗಳನ್ನೂ ಪ್ರವಾದಿ ಮುಹಮ್ಮದ್(ﷺ)ರವರ ಶರೀಅತ್ ಒಳಗೊಂಡಿದೆ ಎಂದು ನಾವು ವಿಶ್ವಾಸವಿಡುತ್ತೇವೆ. ಅಲ್ಲಾಹು ಹೇಳಿದ್ದಾನೆ:

﴿ ۞ شَرَعَ لَكُم مِّنَ ٱلدِّينِ مَا وَصَّىٰ بِهِۦ نُوحٗا وَٱلَّذِيٓ أَوۡحَيۡنَآ إِلَيۡكَ وَمَا وَصَّيۡنَا بِهِۦٓ إِبۡرَٰهِيمَ وَمُوسَىٰ وَعِيسَىٰٓۖ أَنۡ أَقِيمُواْ ٱلدِّينَ وَلَا تَتَفَرَّقُواْ فِيهِۚ ﴾

**“ಅವನು (ಅಲ್ಲಾಹು) ನೂಹ್‌ಗೆ ನಿರ್ದೇಶಿಸಿದ, ನಿನಗೆ ದಿವ್ಯ ಸಂದೇಶವಾಗಿ ನೀಡಿದ ಮತ್ತು ಇಬ್ರಾಹೀಮ್, ಮೂಸಾ ಮತ್ತು ಈಸಾಗೆ ನಿರ್ದೇಶಿಸಿದ ಅದೇ ಧರ್ಮವನ್ನು ನಿಮಗೂ ಧರ್ಮನಿರ್ದೇಶನಗೊಳಿಸಿದ್ದಾನೆ. ಅಂದರೆ ನೀವು ಧರ್ಮವನ್ನು ಸ್ಥಾಪನೆಗೊಳಿಸಬೇಕು ಮತ್ತು ಅದರಲ್ಲಿ ಪಂಗಡಗಳಾಗಿ ವಿಂಗಡಿತರಾಗಬಾರದು.”** (ಕುರ್‌ಆನ್ 42/13)

ಖಂಡಿತವಾಗಿಯೂ ಸಂದೇಶವಾಹಕರೆಲ್ಲರೂ ಮನುಷ್ಯ ಸೃಷ್ಟಿಗಳಾಗಿದ್ದಾರೆ ಎಂದು ನಾವು ವಿಶ್ವಾಸವಿಡುತ್ತೇವೆ. ಪ್ರಭುತ್ವದ ಸವಿಶೇಷತೆಗಳಲ್ಲಿ ಅವರಿಗೆ ಯಾವ ಪಾಲೂ ಇಲ್ಲ. ಅವರ ಪೈಕಿ ಮೊಟ್ಟಮೊದಲಿಗರಾದ ನೂಹ್(عليه السلام)ರವರ ಕುರಿತು ಅಲ್ಲಾಹು

ಹೇಳಿದ್ದಾನೆ:

﴿ وَلَآ أَقُولُ لَكُمۡ عِندِي خَزَآئِنُ ٱللَّهِ وَلَآ أَعۡلَمُ ٱلۡغَيۡبَ وَلَآ أَقُولُ إِنِّي مَلَكٌ ﴾

**“ನನ್ನ ಬಳಿ ಅಲ್ಲಾಹನ ಖಜಾನೆಗಳಿವೆಯೆಂದು ನಾನು ನಿಮ್ಮೊಂದಿಗೆ ಹೇಳುವುದಿಲ್ಲ, ನಾನು ಅಗೋಚರ ಕಾರ್ಯಗಳನ್ನೂ ಅರಿತಿಲ್ಲ ಮತ್ತು ನಾನು ಮಲಕ್ ಆಗಿರುವೆನೆಂದೂ ನಾನು ನಿಮ್ಮೊಂದಿಗೆ ಹೇಳುವುದಿಲ್ಲ.”** (ಕುರ್‌ಆನ್ 11/31)

ಅವರ ಪೈಕಿ ಕಟ್ಟಕಡೆಯವರಾದ ಮುಹಮ್ಮದ್(ﷺ)ರೊಂದಿಗೆ ಅಲ್ಲಾಹು ಈ ರೀತಿ ಹೇಳಬೇಕೆಂದು ಆದೇಶಿದ್ದಾನೆ:

﴿ قُل لَّآ أَقُولُ لَكُمۡ عِندِي خَزَآئِنُ ٱللَّهِ وَلَآ أَعۡلَمُ ٱلۡغَيۡبَ وَلَآ أَقُولُ لَكُمۡ إِنِّي مَلَكٌۖ ﴾

**“(ಓ ಪ್ರವಾದಿ!) ಹೇಳು: ನನ್ನ ಬಳಿ ಅಲ್ಲಾಹನ ಖಜಾನೆಗಳಿವೆಯೆಂದು ನಾನು ನಿಮ್ಮೊಂದಿಗೆ ಹೇಳುವುದಿಲ್ಲ, ನಾನು ಅಗೋಚರ ಕಾರ್ಯಗಳನ್ನೂ ಅರಿತಿಲ್ಲ ಮತ್ತು ನಾನು ಮಲಕ್ ಆಗಿರುವೆನೆಂದೂ ನಾನು ನಿಮ್ಮೊಂದಿಗೆ ಹೇಳುವುದಿಲ್ಲ.”** (ಕುರ್‌ಆನ್ 6/50)

﴿ قُل لَّآ أَمۡلِكُ لِنَفۡسِي نَفۡعٗا وَلَا ضَرًّا إِلَّا مَا شَآءَ ٱللَّهُۚ ﴾

**“(ಓ ಪ್ರವಾದಿ!) ಹೇಳು: ಅಲ್ಲಾಹು ಇಚ್ಛಿಸಿದವುಗಳ ಹೊರತು ನನ್ನ ಸ್ವಂತಕ್ಕಾಗಿ ಯಾವುದೇ ಒಳಿತನ್ನಾಗಲಿ ಕೆಡುಕನ್ನಾಗಲಿ ನಾನು ಒಡೆತನದಲ್ಲಿಟ್ಟುಕೊಂಡಿಲ್ಲ.”** (ಕುರ್‌ಆನ್ 7/188)

﴿ قُلۡ إِنِّي لَآ أَمۡلِكُ لَكُمۡ ضَرّٗا وَلَا رَشَدٗا ٢١ قُلۡ إِنِّي لَن يُجِيرَنِي مِنَ ٱللَّهِ أَحَدٞ وَلَنۡ أَجِدَ مِن دُونِهِۦ مُلۡتَحَدًا ٢٢ ﴾

**“(ಓ ಪ್ರವಾದಿ!) ಹೇಳು: ಖಂಡಿತವಾಗಿಯೂ ನಾನು ನಿಮಗೋಸ್ಕರ ಯಾವುದೇ ಕೆಡುಕನ್ನಾಗಲಿ ಸನ್ಮಾರ್ಗವನ್ನಾಗಲಿ ಒಡೆತನದಲ್ಲಿಟ್ಟುಕೊಂಡಿಲ್ಲ. ಹೇಳು: ಖಂಡಿತವಾಗಿಯೂ ಅಲ್ಲಾಹನಿಗೆದುರಾಗಿ ನನಗೋಸ್ಕರ ರಕ್ಷಣೆಯನ್ನು ನೀಡಲು ಯಾರಿಗೂ ಸಾಧ್ಯವಿಲ್ಲ. ಅವನಲ್ಲಿ ಹೊರತು ಬೇರೆ ಆಭಯ ಕೇಂದ್ರವನ್ನು ನಾನೆಂದಿಗೂ ಕಂಡುಕೊಳ್ಳುವುದೂ ಇಲ್ಲ.”** (ಕುರ್‌ಆನ್ 72/21–22)[37]

---

**37.** ‘(ಓ ಪ್ರವಾದಿ!) ಹೇಳು: ನಾನು ನಿಮ್ಮಂತಿರುವ ಓರ್ವ ಮನುಷ್ಯ ಮಾತ್ರ. ಖಂಡಿತವಾಗಿಯೂ ನಿಮ್ಮ ಆರಾಧ್ಯನು ಏಕೈಕ ಆರಾಧ್ಯನಾಗಿದ್ದಾನೆಂದು ನನಗೆ ದಿವ್ಯಸಂದೇಶ ನೀಡಲಾಗುತ್ತಿದೆ’ (ಕುರ್‌ಆನ್ 41/6) ಎಂಬ ಆಯತ್ತನ್ನು ವ್ಯಾಖ್ಯಾನಿಸುತ್ತಾ ಇಬ್ನ್ ಜರೀರ್ ಅತ್ತಬರೀ ತನ್ನ ‘ತಫ್ಸೀರ್’ನಲ್ಲಿ (11/86) ಹೇಳಿದ್ದಾರೆ: ‘ಅಲ್ಲಾಹು ಹೇಳುತ್ತಾನೆ: ಓ ಮುಹಮ್ಮದ್! ನಿನ್ನ ಜನತೆಯ ಪೈಕಿ ಅಲ್ಲಾಹನ ದೃಷ್ಟಾಂತಗಳಿಂದ ವಿಮುಖರಾಗಿರುವವರೊಂದಿಗೆ ಹೇಳು: ವರ್ಗ (ಜಿನ್ಸ್), ರೂಪ (ಸೂರಃ) ಮತ್ತು ಆಕೃತಿ (ಹೈಅಃ)ಯಲ್ಲಿ ನಾನು ಆದಮ್ ಸಂತತಿಗಳ ಪೈಕಿ ಒಬ್ಬ ಮನುಷ್ಯ ಮಾತ್ರ. ನಾನೊಬ್ಬ ಮಲಕ್ ಅಲ್ಲ. ನೀವು ಆರಾಧನೆ ಮಾಡಲು ಅರ್ಹನಾಗಿರುವುದು ಏಕೈಕ ಆರಾಧ್ಯನು ಮಾತ್ರವಾಗಿದ್ದಾನೆ ಎಂದು ನನಗೆ ದಿವ್ಯ ಸಂದೇಶ ನೀಡಲಾಗುತ್ತಿದೆ.’

ಅವರು (ಸಂದೇಶವಾಹಕರು) ಅಲ್ಲಾಹನ ದಾಸರಲ್ಲಿ ಸೇರಿದ ದಾಸರಾಗಿದ್ದಾರೆಂದು ನಾವು ವಿಶ್ವಾಸವಿಡುತ್ತೇವೆ. ಸಂದೇಶವಾಹಕತ್ವವನ್ನು ದಯಪಾಲಿಸುವ ಮೂಲಕ ಅಲ್ಲಾಹು ಅವರನ್ನು ಗೌರವಿಸಿದ್ದಾನೆ, ಅವರು ಅತ್ಯುನ್ನತವಾದ ಸ್ಥಾನದಲ್ಲಿದ್ದಾಗಲೂ, ಅವರನ್ನು ಹಾಡಿಹೊಗಳಿದ ಸಂದರ್ಭಗಳಲ್ಲೂ ಅಲ್ಲಾಹು ಅವರನ್ನು ತನ್ನ ದಾಸ್ಯತ್ವ (ಉಬೂದಿಯ್ಯಃ) ದೊಂದಿಗೇ ಸೇರಿಸಿ ಹೇಳಿದ್ದಾನೆ.

ಅವರ ಪೈಕಿ ಮೊದಲನೆಯವರಾದ ನೂಹ್(عليه السلام)ರವರ ಕುರಿತು ಅಲ್ಲಾಹು ಹೇಳಿದ್ದಾನೆ:

﴿ ذُرِّيَّةَ مَنْ حَمَلْنَا مَعَ نُوحٍ ۚ إِنَّهُۥ كَانَ عَبْدًا شَكُورًا ﴿٣﴾ ﴾

**“ನೂಹ್‌ನೊಂದಿಗೆ ನಾವು ಹೊತ್ತೊಯ್ದವರ ಸಂತತಿಗಳು. ಖಂಡಿತವಾಗಿಯೂ ಅವನು (ನೂಹ್) ಅತ್ಯಂತ ಕೃತಜ್ಞನಾದ ದಾಸನಾಗಿದ್ದನು.”** (ಕುರ್‌ಆನ್ 17/3)

ಅವರ ಪೈಕಿ ಕೊನೆಯವರಾದ ಮುಹಮ್ಮದ್(ﷺ)ರವರ ಕುರಿತು ಅಲ್ಲಾಹು ಹೇಳಿದ್ದಾನೆ:

﴿ تَبَارَكَ ٱلَّذِى نَزَّلَ ٱلْفُرْقَانَ عَلَىٰ عَبْدِهِۦ لِيَكُونَ لِلْعَـٰلَمِينَ نَذِيرًا ﴿١﴾ ﴾

**“ಸತ್ಯಾಸತ್ಯ ವಿವೇಚನಾ ಗ್ರಂಥವನ್ನು (ಕುರ್‌ಆನ್) ತನ್ನ ದಾಸನ ಮೇಲೆ, ಅವನು ಜಗತ್ತಿನವರಿಗೆ ಮುನ್ನೆಚ್ಚರಿಕೆ ನೀಡುವವನಾಗುವ ಸಲುವಾಗಿ ಅವತೀರ್ಣಗೊಳಿಸಿದವನು (ಅಲ್ಲಾಹು) ಅನುಗ್ರಹೀತನಾಗಿದ್ದಾನೆ.”** (ಕುರ್‌ಆನ್ 25/1)

ಇತರ ಪ್ರವಾದಿಗಳ ಕುರಿತು ಅಲ್ಲಾಹು ಹೇಳಿದ್ದಾನೆ:

﴿ وَٱذْكُرْ عِبَـٰدَنَآ إِبْرَٰهِيمَ وَإِسْحَـٰقَ وَيَعْقُوبَ أُو۟لِى ٱلْأَيْدِى وَٱلْأَبْصَـٰرِ ﴿٤٥﴾ ﴾

**“ಅತ್ಯಂತ ಬಲಶಾಲಿಗಳೂ ಉನ್ನತ ಮೇಧಾವಿಗಳೂ ಆಗಿರುವ ನಮ್ಮ ದಾಸರಾದ ಇಬ್ರಾಹೀಮ್, ಇಸ್‌ಹಾಕ್ ಮತ್ತು ಯಅ್‌ಕೂಬ್‌ರನ್ನು ಸ್ಮರಿಸು.”** (ಕುರ್‌ಆನ್ 38/45)

﴿ وَٱذْكُرْ عَبْدَنَا دَاوُۥدَ ذَا ٱلْأَيْدِ ۖ إِنَّهُۥٓ أَوَّابٌ ﴿١٧﴾ ﴾

**“ಅತ್ಯಂತ ಪ್ರಬಲನೂ ನಮ್ಮ ದಾಸನೂ ಆಗಿರುವ ದಾವೂದ್‌ನನ್ನು ಸ್ಮರಿಸು. ಖಂಡಿತವಾಗಿಯೂ ಅವನು ಅತಿಹೆಚ್ಚು ಪಶ್ಚಾತ್ತಾಪಪಡುವವನಾಗಿದ್ದನು.”** (ಕುರ್‌ಆನ್ 38/17)

﴿ وَوَهَبْنَا لِدَاوُۥدَ سُلَيْمَـٰنَ ۚ نِعْمَ ٱلْعَبْدُ ۖ إِنَّهُۥٓ أَوَّابٌ ﴿٣٠﴾ ﴾

**“ನಾವು ದಾವೂದ್‌ನಿಗೆ ಸುಲೈಮಾನ್‌ನನ್ನು ದಯಪಾಲಿಸಿದೆವು. ಎಷ್ಟೊಂದು ಉತ್ಕೃಷ್ಟ ದಾಸನು! ಖಂಡಿತವಾಗಿಯೂ ಅವನು ಅತಿಹೆಚ್ಚು ಪಶ್ಚಾತ್ತಾಪಪಡುವವನಾಗಿದ್ದನು.”**

(ಕುರ್‌ಆನ್ 38/30)

ಮತ್ತು ಅಲ್ಲಾಹು ಈಸಾ ಇಬ್ನ್ ಮರ್ಯಮ್(ﷺ)ರವರ ಕುರಿತು ಹೀಗೆಂದಿದ್ದಾನೆ:

﴿إِنْ هُوَ إِلَّا عَبْدٌ أَنْعَمْنَا عَلَيْهِ وَجَعَلْنَاهُ مَثَلًا لِّبَنِي إِسْرَائِيلَ ﴿٥٩﴾﴾

**"ಅವನು ಒಬ್ಬ ದಾಸನ ಹೊರತು ಬೇರೇನೂ ಆಗಿರಲಿಲ್ಲ. ನಾವು ಅವನನ್ನು ಅನುಗ್ರಹಿಸಿದೆವು ಮತ್ತು ಇಸ್ರಾಈಲ್ ಸಂತತಿಗಳಿಗೆ ಅವನನ್ನೊಂದು ಉದಾಹರಣೆಯನ್ನಾಗಿ ಮಾಡಿದೆವು."** (ಕುರ್‌ಆನ್ 43/59)

ಖಂಡಿತವಾಗಿಯೂ ಅಲ್ಲಾಹು ಪ್ರವಾದಿ ಮುಹಮ್ಮದ್(ﷺ)ರವರ ಸಂದೇಶವಾಹಕತ್ವ (ರಿಸಾಲತ್)ದೊಂದಿಗೆ ಸಂದೇಶವಾಹಕತ್ವವನ್ನು ಸಮಾಪ್ತಿಗೊಳಿಸಿದ್ದಾನೆ ಮತ್ತು ಮುಹಮ್ಮದ್(ﷺ)ರವರನ್ನು ಸಂಪೂರ್ಣ ಮಾನವಕುಲದೆಡೆಗೆ ಸಂದೇಶವಾಹಕರಾಗಿ ನಿಯೋಗಿಸಿದ್ದಾನೆ ಎಂದು ನಾವು ವಿಶ್ವಾಸವಿಡುತ್ತೇವೆ. ಯಾಕೆಂದರೆ ಅಲ್ಲಾಹು ಹೇಳಿದ್ದಾನೆ:

﴿قُلْ يَا أَيُّهَا النَّاسُ إِنِّي رَسُولُ اللَّهِ إِلَيْكُمْ جَمِيعًا الَّذِي لَهُ مُلْكُ السَّمَاوَاتِ وَالْأَرْضِ لَا إِلَٰهَ إِلَّا هُوَ يُحْيِي وَيُمِيتُ فَآمِنُوا بِاللَّهِ وَرَسُولِهِ النَّبِيِّ الْأُمِّيِّ الَّذِي يُؤْمِنُ بِاللَّهِ وَكَلِمَاتِهِ وَاتَّبِعُوهُ لَعَلَّكُمْ تَهْتَدُونَ ﴿١٥٨﴾﴾

**"(ಓ ಪ್ರವಾದಿ!) ಹೇಳು: ಓ ಜನರೇ! ಆಕಾಶಗಳ ಮತ್ತು ಭೂಮಿಯ ಆಧಿಪತ್ಯವು ಯಾರದ್ದಾಗಿದೆಯೋ ಆ ಅಲ್ಲಾಹನ ವತಿಯಿಂದ ನಾನು ನಿಮ್ಮೆಲ್ಲರ ಕಡೆಗಿರುವ ಸಂದೇಶವಾಹಕನಾಗಿದ್ದೇನೆ. ಅವನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಜೀವವನ್ನು ನೀಡುತ್ತಾನೆ ಮತ್ತು ಮರಣಗೊಳಿಸುತ್ತಾನೆ. ಆದ್ದರಿಂದ ಅಲ್ಲಾಹನಲ್ಲಿ ಮತ್ತು ಅವನ ವಚನಗಳಲ್ಲಿ ವಿಶ್ವಾಸವಿಡುವ ಅಲ್ಲಾಹನ ಸಂದೇಶವಾಹಕನಾದ ನಿರಕ್ಷರಿ ಪ್ರವಾದಿಯ ಮೇಲೆ ವಿಶ್ವಾಸವಿಡಿರಿ ಮತ್ತು ಅವನನ್ನು ಹಿಂಬಾಲಿಸಿರಿ. ನೀವು ಸನ್ಮಾರ್ಗ ಪಡೆದವರಾಗಲೂಬಹುದು."** (ಕುರ್‌ಆನ್ 7/158)

ಪ್ರವಾದಿ(ﷺ)ರವರ ಶರೀಅತ್ ಅಲ್ಲಾಹು ತನ್ನ ದಾಸರಿಗಾಗಿ ತೃಪ್ತಿಪಟ್ಟ ಇಸ್ಲಾಮ್ ಧರ್ಮವಾಗಿದೆ ಮತ್ತು ಅದರ ಹೊರತು ಬೇರೊಂದು ಧರ್ಮವನ್ನು ಅಲ್ಲಾಹು ಯಾರಿಂದಲೂ ಸ್ವೀಕರಿಸುವುದಿಲ್ಲ ಎಂದು ನಾವು ವಿಶ್ವಾಸವಿಡುತ್ತೇವೆ. ಯಾಕೆಂದರೆ ಅಲ್ಲಾಹು ಹೇಳಿದ್ದಾನೆ:

﴿إِنَّ الدِّينَ عِندَ اللَّهِ الْإِسْلَامُ﴾

**"ಖಂಡಿತವಾಗಿಯೂ ಅಲ್ಲಾಹನ ಬಳಿ ಧರ್ಮವು ಇಸ್ಲಾಮ್ ಆಗಿದೆ."** (ಕುರ್‌ಆನ್ 3/19)

﴿ ٱلۡيَوۡمَ أَكۡمَلۡتُ لَكُمۡ دِينَكُمۡ وَأَتۡمَمۡتُ عَلَيۡكُمۡ نِعۡمَتِي وَرَضِيتُ لَكُمُ ٱلۡإِسۡلَٰمَ دِينٗاۚ ﴾

**“ಇಂದು ನಾನು ನಿಮಗೆ ನಿಮ್ಮ ಧರ್ಮವನ್ನು ಪೂರ್ಣಗೊಳಿಸಿದೆನು ಮತ್ತು ನಿಮ್ಮ ಮೇಲೆ ನನ್ನ ಅನುಗ್ರಹವನ್ನು ಪೂರ್ತೀಕರಿಸಿದೆನು ಹಾಗೂ ಇಸ್ಲಾಮನ್ನು ಒಂದು ಧರ್ಮವಾಗಿ ನಾನು ನಿಮಗೆ ತೃಪ್ತಿಪಟ್ಟಿರುವೆನು.”** (ಕುರ್‌ಆನ್ 5/3)

﴿ وَمَن يَبۡتَغِ غَيۡرَ ٱلۡإِسۡلَٰمِ دِينٗا فَلَن يُقۡبَلَ مِنۡهُ وَهُوَ فِي ٱلۡأٓخِرَةِ مِنَ ٱلۡخَٰسِرِينَ ٨٥ ﴾

**“ಇಸ್ಲಾಮ್ ಅಲ್ಲದ ಒಂದು ಧರ್ಮವನ್ನು ಯಾರಾದರೂ ಅರಸುವುದಾದರೆ ಅವನಿಂದ ಅದು ಸ್ವೀಕೃತವಾಗಲಾರದು ಮತ್ತು ಪರಲೋಕದಲ್ಲಿ ಅವನು ನಷ್ಟಹೊಂದಿದವರ ಪೈಕಿ ಸೇರಿದವನಾಗುವನು.”** (ಕುರ್‌ಆನ್ 3/85)

ನಮ್ಮ ಅಭಿಪ್ರಾಯ ಪ್ರಕಾರ ಇಸ್ಲಾಮ್ ಧರ್ಮವಲ್ಲದೆ ಯಹೂದ ಧರ್ಮ ಅಥವಾ ಕ್ರೈಸ್ತಧರ್ಮ ಅಥವಾ ಇನ್ನಿತರ ಧರ್ಮಗಳು ಕೂಡ ನೇರವಾಗಿವೆ ಮತ್ತು ಅವು ಅಲ್ಲಾಹನ ಬಳಿ ಸ್ವೀಕೃತವಾಗಿವೆ ಎಂದು ಯಾರಾದರೂ ಇಂದು ವಾದಿಸುವುದಾದರೆ ತೌಬಾ ಮಾಡುವುದು ಅವನಿಗೆ ಕಡ್ಡಾಯವಾಗಿದೆ. ಅನ್ಯಥಾ ಅವನನ್ನು ವಧಿಸಬೇಕಾಗಿದೆ. ಅವನು ಇಸ್ಲಾಮಿನಿಂದ ಹೊರಹೋದವನಾಗಿದ್ದಾನೆ. ಯಾಕೆಂದರೆ ಅವನು ಕುರ್‌ಆನನ್ನು ನಿಷೇಧಿಸಿದವನಾಗಿದ್ದಾನೆ.[38]

ನಮ್ಮ ಅಭಿಪ್ರಾಯ ಪ್ರಕಾರ ಮನುಷ್ಯರೆಲ್ಲರಿಗೂ ಸಂದೇಶವಾಹಕರಾಗಿ ಬಂದಿರುವ ಮುಹಮ್ಮದ್(ﷺ)ರವರ ರಿಸಾಲತ್ (ಸಂದೇಶವಾಹಕತ್ವ)ದಲ್ಲಿ ಯಾರಾದರೂ ಅವಿಶ್ವಾಸವಿಟ್ಟರೆ ಅವನು ಸರ್ವ ಪ್ರವಾದಿಗಳಲ್ಲೂ ಅವಿಶ್ವಾಸವಿಡುವವನಾಗಿದ್ದಾನೆ. ತಾನು ವಿಶ್ವಾಸವಿಡುತ್ತಿದ್ದೇನೆಂದು ಮತ್ತು ಅನುಸರಿಸುತ್ತಿದ್ದೇನೆಂದು ಅವನು ವಾದಿಸುವ ಪ್ರವಾದಿಯಲ್ಲಿಯೂ ಕೂಡ ಅವಿಶ್ವಾಸವಿಟ್ಟವನಾಗಿದ್ದಾನೆ. ಯಾಕೆಂದರೆ ಅಲ್ಲಾಹು

---

**38**. ಇದರ ಕುರಿತಿರುವ ಏಕಾಭಿಪ್ರಾಯವನ್ನು ಇಮಾಮ್ ನವವೀ ತನ್ನ ‘ರೌದತುತ್ತಾಲಿಬೀನ್’ನಲ್ಲಿ (10/70) ಹೀಗೆ ವ್ಯಕ್ತಪಡಿಸಿದ್ದಾರೆ: ‘ಇಸ್ಲಾಮೇತರ ಧರ್ಮವನ್ನು ಅನುಸರಿಸುವವರು ಅವಿಶ್ವಾಸಿಗಳಲ್ಲವೆಂದು ಯಾರಾದರೂ ನಂಬಿಕೆಯಿಟ್ಟರೆ, ಅಥವಾ ಅವರು ಅವಿಶ್ವಾಸಿಗಳೆಂಬ ಬಗ್ಗೆ ಸಂಶಯ ತಾಳಿದರೆ, ಅಥವಾ ಅವರ ಧರ್ಮವು ಸರಿಯೆಂದು ಪರಿಗಣಿಸಿದರೆ, ಅವನು ಸ್ವತಃ ಅವಿಶ್ವಾಸಿಯಾಗಿದ್ದಾನೆ. ಅವನು ತನ್ನ ಇಸ್ಲಾಮನ್ನು ಬಹಿರಂಗವಾಗಿಸಿದರೂ, ಅದರಲ್ಲಿ ವಿಶ್ವಾಸವಿಟ್ಟರೂ ಕೂಡ.’

**ಸೂಚನೆ:** ಕುರ್‌ಆನ್ ಕೆಲವೊಮ್ಮೆ ಯಹೂದ ಕ್ರೈಸ್ತರನ್ನು ‘ಅಹ್ಲುಲ್ ಕಿತಾಬ್’ (ಗ್ರಂಥದವರು) ಎಂದು ಕರೆದಿರುವುದು ಅವರು ಅವಿಶ್ವಾಸಿಗಳಾಗಿದ್ದಾರೆ ಎಂಬ ವಾಸ್ತವಿಕತೆಯನ್ನು ನಿರಾಕರಿಸುವುದಿಲ್ಲ. ಶೈಖುಲ್ ಇಸ್ಲಾಮ್ ಇಬ್ನ್ ತೈಮಿಯ್ಯಃ ತನ್ನ ‘ಮಜ್ಮೂಉಲ್ ಫತಾವಾ’ದಲ್ಲಿ (35/227–228) ಹೇಳಿದ್ದಾರೆ: ‘ಅಹ್ಲುಲ್ ಕಿತಾಬ್‌ಗಳ ಕೈಯಲ್ಲಿ ಇಂದು ಅಸ್ತಿತ್ವದಲ್ಲಿರುವ ಗ್ರಂಥಗಳಲ್ಲಿ ವಿಶ್ವಾಸವಿಡುವವರೆಲ್ಲರೂ ಅಹ್ಲುಲ್ ಕಿತಾಬ್‌ಗಳಾಗಿದ್ದಾರೆ ಮತ್ತು ಅವಿಶ್ವಾಸಿಗಳಾಗಿದ್ದಾರೆ. ಯಾಕೆಂದರೆ ಅವರು ಬದಲಾವಣೆಗೊಂಡ ಮತ್ತು ರದ್ದುಗೊಳಿಸಲಾದ ಗ್ರಂಥಗಳಲ್ಲಿ ವಿಶ್ವಾಸವಿಡುವವರಾಗಿದ್ದಾರೆ. ಇತರೆಲ್ಲ ಅವಿಶ್ವಾಸಿಗಳಂತೆ ಅವರು ಕೂಡ ಶಾಶ್ವತವಾಗಿ ನರಕಾಗ್ನಿಯಲ್ಲಿ ವಾಸಿಸುವರು. ಅಲ್ಲಾಹು ಅವರ ಮೇಲೆ ಜಿಝ್ಯ ನೀಡಲು ವಿಧಿಸಿದ್ದರೂ, ಅವರ ಆಹಾರವನ್ನು ಸೇವಿಸಲು ಮತ್ತು ಅವರ ಮಹಿಳೆಯರನ್ನು ವಿವಾಹವಾಗಲು ಅನುಮತಿ ನೀಡಿ–ದ್ದರೂ ಕೂಡ.’

ಹೇಳಿದ್ದಾನೆ:

﴿كَذَّبَتْ قَوْمُ نُوحٍ ٱلْمُرْسَلِينَ ﴿١٠٥﴾﴾

**“ನೂಹ್‌ನ ಜನತೆಯು ಸಂದೇಶವಾಹಕರನ್ನು ನಿಷೇಧಿಸಿದರು.”** (ಕುರ್‌ಆನ್ 26/105)

ವಾಸ್ತವಿಕವಾಗಿ ನೂಹ್(ﷺ)ರವರಿಗಿಂತ ಮುಂಚೆ ಯಾವ ಸಂದೇಶವಾಹಕನೂ ಆಗಮಿಸದಿದ್ದರೂ ಕೂಡ ಅವರು ಸಂದೇಶವಾಹಕರೆಲ್ಲರನ್ನೂ ನಿಷೇಧಿಸಿದ್ದಾರೆ ಎಂದು ಇಲ್ಲಿ ಹೇಳಲಾಗಿದೆ.[39] ಅಲ್ಲಾಹು ಹೇಳಿದ್ದಾನೆ:

﴿إِنَّ ٱلَّذِينَ يَكْفُرُونَ بِٱللَّهِ وَرُسُلِهِۦ وَيُرِيدُونَ أَن يُفَرِّقُوا۟ بَيْنَ ٱللَّهِ وَرُسُلِهِۦ وَيَقُولُونَ نُؤْمِنُ بِبَعْضٍ وَنَكْفُرُ بِبَعْضٍ وَيُرِيدُونَ أَن يَتَّخِذُوا۟ بَيْنَ ذَٰلِكَ سَبِيلًا ﴿١٥٠﴾ أُو۟لَٰٓئِكَ هُمُ ٱلْكَٰفِرُونَ حَقًّا ۚ وَأَعْتَدْنَا لِلْكَٰفِرِينَ عَذَابًا مُّهِينًا ﴿١٥١﴾﴾

**“ಅಲ್ಲಾಹನಲ್ಲಿ ಮತ್ತು ಸಂದೇಶವಾಹಕರಲ್ಲಿ ಅವಿಶ್ವಾಸವಿಡುವವರು, ಅಲ್ಲಾಹನ ಮತ್ತು ಅವನ ಸಂದೇಶವಾಹಕರ ಮಧ್ಯೆ ತಾರತಮ್ಯ ಮಾಡುವವರು, ನಾವು ಕೆಲವರಲ್ಲಿ ವಿಶ್ವಾಸವಿಡುತ್ತೇವೆ ಮತ್ತು ಕೆಲವರಲ್ಲಿ ಅವಿಶ್ವಾಸವಿಡುತ್ತೇವೆ ಎಂದು ಹೇಳುವವರು ಮತ್ತು ಅದರ ನಡುವೆ ಮಾರ್ಗವೊಂದನ್ನು ಕಂಡುಕೊಳ್ಳಲು ಬಯಸುವವರು. ಸತ್ಯವಾಗಿಯೂ ಅವರೇ ಅವಿಶ್ವಾಸಿಗಳು. ಅವಿಶ್ವಾಸಿಗಳಿಗಾಗಿ ನಾವು ನಿಂದನೀಯ ಶಿಕ್ಷೆಯನ್ನು ಸಿದ್ಧಗೊಳಿಸಿದ್ದೇವೆ.”** (ಕುರ್‌ಆನ್ 4/150–151)

ಖಂಡಿತವಾಗಿಯೂ ಪ್ರವಾದಿ ಮುಹಮ್ಮದ್(ﷺ)ರವರ ನಂತರ ಬೇರೊಬ್ಬ ಪ್ರವಾದಿಯ ಆಗಮನವಿಲ್ಲ ಎಂದು ನಾವು ವಿಶ್ವಾಸವಿಡುತ್ತೇವೆ. ಅವರ ನಂತರ ಯಾರಾದರೂ ಪ್ರವಾದಿತ್ವವನ್ನು ವಾದಿಸಿದರೆ ಅಥವಾ ಆ ರೀತಿ ವಾದಿಸುವವನ ವಾದವನ್ನು ದೃಢೀಕರಿಸಿದರೆ ಅವನು ಅವಿಶ್ವಾಸಿಯಾಗಿದ್ದಾನೆ. ಯಾಕೆಂದರೆ ಅವನು ಅಲ್ಲಾಹನನ್ನು, ಸಂದೇಶವಾಹಕರನ್ನು ಮತ್ತು ಮುಸ್ಲಿಮರ ಏಕಾಭಿಪ್ರಾಯವನ್ನು ನಿಷೇಧಿಸಿದ್ದಾನೆ.[40]

ಖಂಡಿತವಾಗಿಯೂ ಪ್ರವಾದಿ(ﷺ)ರಿಗೆ ಅವರ ಸಮುದಾಯದಲ್ಲಿ ಸೇರಿದ ಸನ್ಮಾರ್ಗದಲ್ಲಿ ನೆಲೆನಿಂತ ಉತ್ತರಾಧಿಕಾರಿಗಳಿದ್ದರು ಮತ್ತು ಅವರು ವಿದ್ಯೆಯಲ್ಲಿಯೂ, ಉಪದೇಶದಲ್ಲಿಯೂ, ವಿಶ್ವಾಸಿಗಳ ಮೇಲಿರುವ ಆಡಳಿತಾಧಿಕಾರದಲ್ಲಿಯೂ ಪ್ರವಾದಿ(ﷺ)ರವರ ಉತ್ತರಾಧಿಕಾರವನ್ನು ವಹಿಸಿದ್ದರು ಎಂದು ನಾವು ವಿಶ್ವಾಸವಿಡುತ್ತೇವೆ.

---

**39**. ಇದೇ ಅಭಿಪ್ರಾಯವನ್ನು ಇಬ್ನ್ ಕಸೀರ್ ತನ್ನ ‘ತಫ್ಸೀರ್’ನಲ್ಲಿ (3/353) ವ್ಯಕ್ತಪಡಿಸಿದ್ದಾರೆ.

**40**. ಪ್ರವಾದಿತ್ವವನ್ನು ವಾದಿಸಿದ ಮಿರ್ಝಾ ಗುಲಾಮ್ ಅಹ್ಮದ್ ಕಾದಿಯಾನಿ ಮತ್ತು ಅವನ ವಾದವನ್ನು ದೃಢೀಕರಿಸುವ ಕಾದಿಯಾನಿಗಳು ಅವಿಶ್ವಾಸಿಗಳಾಗಿದ್ದಾರೆ ಎಂಬ ವಿಷಯದಲ್ಲಿ ಯಾವ ಸಂದೇಹವೂ ಇಲ್ಲ.

ಅವರ ಪೈಕಿ ಅತಿಶ್ರೇಷ್ಠರು ಮತ್ತು ಉತ್ತರಾಧಿಕಾರಕ್ಕೆ ಅತ್ಯಂತ ಅರ್ಹರು ಅಬೂಬಕ್ರ್ ಅಸ್ಸಿದ್ದೀಕ್ ಆಗಿದ್ದರು, ನಂತರ ಉಮರ್ ಇಬ್ನುಲ್ ಖತ್ತಾಬ್ ಆಗಿದ್ದರು, ನಂತರ ಉಸ್ಮಾನ್ ಇಬ್ನ್ ಅಫ್ಫಾನ್ ಆಗಿದ್ದರು, ನಂತರ ಅಲೀ ಇಬ್ನ್ ಅಬೀ ತಾಲಿಬ್ ಆಗಿದ್ದರು ಎಂದು ನಾವು ವಿಶ್ವಾಸವಿಡುತ್ತೇವೆ. (ಅಲ್ಲಾಹು ಅವರೆಲ್ಲರ ಬಗ್ಗೆ ತೃಪ್ತಿಪಡಲಿ).

ಶ್ರೇಷ್ಠತೆಯಲ್ಲಿ ಅವರ ನಡುವೆ ಪದವಿಗಳಿರುವಂತೆ ಉತ್ತರಾಧಿಕಾರದಲ್ಲಿಯೂ ಅವರ ನಡುವೆ ಪದವಿಗಳಿದ್ದವು. ಉತ್ತಮ ಶತಮಾನಗಳ ಕಾಲದಲ್ಲಿ ಉತ್ತರಾಧಿಕಾರಕ್ಕೆ ಅತ್ಯುತ್ತಮನಾದ ಮತ್ತು ಅರ್ಹನಾದ ವ್ಯಕ್ತಿಯಿದ್ದೂ ಕೂಡ ಹೊಂದಿರುವ ಅಲ್ಲಾಹು ಬೇರೊಬ್ಬ ವ್ಯಕ್ತಿಯನ್ನು ಆರಿಸುವುದು ಅವನ ಪರಿಪೂರ್ಣ ಯುಕ್ತಿಗೆ ಹೇಳಿಸಿದ್ದಲ್ಲ.[41]

ಶ್ರೇಷ್ಠತೆಯಲ್ಲಿ ಇವರಿಗಿಂತ ಕೆಳಗಿರುವವರು ತನಗಿಂತ ಶ್ರೇಷ್ಠವಾಗಿರುವವರ ಮೇಲೆ ಕೆಲವು ವಿಷಯಗಳಲ್ಲಿ ವಿಶೇಷತೆಯನ್ನು ಹೊಂದಿದ್ದಾರೆ ಎಂದು ನಾವು ವಿಶ್ವಾಸವಿಡುತ್ತೇವೆ. ಆದರೆ ಯಾರು ತನಗಿಂತಲೂ ಶ್ರೇಷ್ಠರಾಗಿದ್ದಾರೋ ಅವರ ಮೇಲೆ ಸಾರ್ವತ್ರಿಕವಾದ ಶ್ರೇಷ್ಠತೆಯನ್ನು ಹೊಂದಲು ಇದು ಅವನನ್ನು ಅರ್ಹಗೊಳಿಸುವುದಿಲ್ಲ. ಯಾಕೆಂದರೆ ಶ್ರೇಷ್ಠತೆಯ ಅನಿವಾರ್ಯತೆಗಳು ಹಲವಾರು ಇವೆ ಮತ್ತು ಅನೇಕ ವಿಧಗಳಲ್ಲಿವೆ.

ಖಂಡಿತವಾಗಿಯೂ ಈ ಸಮುದಾಯವು ಸಮುದಾಯಗಳ ಪೈಕಿ ಅತ್ಯಂತ ಶ್ರೇಷ್ಠವೆಂದೂ ಅಲ್ಲಾಹನ ಬಳಿ ಅತ್ಯಂತ ಗೌರವಾರ್ಹವೆಂದೂ ನಾವು ವಿಶ್ವಾಸವಿಡುತ್ತೇವೆ.

ಯಾಕೆಂದರೆ ಅಲ್ಲಾಹು ಹೇಳಿದ್ದಾನೆ:

﴿ كُنتُمْ خَيْرَ أُمَّةٍ أُخْرِجَتْ لِلنَّاسِ تَأْمُرُونَ بِالْمَعْرُوفِ وَتَنْهَوْنَ عَنِ الْمُنكَرِ وَتُؤْمِنُونَ بِاللَّهِ ﴾

**“ನೀವು ಜನರಿಗಾಗಿ ಹೊರತರಲಾದ ಉತ್ತಮ ಸಮುದಾಯವಾಗಿದ್ದೀರಿ. ನೀವು ಒಳಿತನ್ನು ಆದೇಶಿಸುತ್ತೀರಿ ಮತ್ತು ಕೆಡುಕಿನಿಂದ ತಡೆಯುತ್ತಿರುವಿರಿ ಹಾಗೂ ಅಲ್ಲಾಹನಲ್ಲಿ ವಿಶ್ವಾಸವಿಡುತ್ತೀರಿ.”** (ಕುರ್‌ಆನ್ 3/110)

ಈ ಸಮುದಾಯದಲ್ಲಿ ಅತ್ಯಂತ ಶ್ರೇಷ್ಠರಾಗಿರುವವರು ಸಹಾಬಾಗಳಾಗಿದ್ದಾರೆ, ನಂತರ ತಾಬಿಊನ್‌ಗಳಾಗಿದ್ದಾರೆ, ನಂತರ ತಾಬಿಉತ್ತಾಬಿಈನ್‌ಗಳಾಗಿದ್ದಾರೆ ಎಂದು

---

**41**. ಅಂದರೆ ಪ್ರವಾದಿ(ﷺ)ರವರ ಮರಣಾನಂತರ ಖಿಲಾಫತ್‌ನ ಅಧಿಕಾರವನ್ನು ವಹಿಸಲು ಅತ್ಯಂತ ಅರ್ಹರು ಅಬೂಬಕ್ರ್ ಅಸ್ಸಿದ್ದೀಕ್(ರ)ರವರಾಗಿದ್ದರು. ಅವರ ಮರಣಾನಂತರ ಖಿಲಾಫತ್‌ನ ಅಧಿಕಾರವನ್ನು ವಹಿಸಲು ಅತ್ಯಂತ ಅರ್ಹರು ಉಮರ್ ಇಬ್ನುಲ್ ಖತ್ತಾಬ್(ರ)ರವರಾಗಿದ್ದರು. ಅವರ ಮರಣಾನಂತರ ಖಿಲಾಫತ್‌ನ ಅಧಿಕಾರವನ್ನು ವಹಿಸಲು ಅತ್ಯಂತ ಅರ್ಹರು ಉಸ್ಮಾನ್ ಇಬ್ನ್ ಅಫ್ಫಾನ್ (ರ)ರವರಾಗಿದ್ದರು. ಅವರ ಮರಣಾನಂತರ ಖಿಲಾಫತ್‌ನ ಅಧಿಕಾರವನ್ನು ವಹಿಸಲು ಅತ್ಯಂತ ಅರ್ಹರು ಅಲೀ ಇಬ್ನ್ ಅಬೀ ತಾಲಿಬ್(ರ)ರವರಾಗಿದ್ದರು. ಪ್ರವಾದಿ(ﷺ)ರವರ ಮರಣಾನಂತರ ಖಿಲಾಫತ್‌ನ ಅಧಿಕಾರವನ್ನು ವಹಿಸಲು ಅತ್ಯಂತ ಅರ್ಹರು ಅಲೀ ಇಬ್ನ್ ಅಬೀ ತಾಲಿಬ್(ರ)ರವರಾಗಿದ್ದರೂ ಕೂಡ ಅಬೂಬಕ್ರ್ ಅಸ್ಸಿದ್ದೀಕ್(ರ) ಮತ್ತು ಉಮರ್ ಇಬ್ನುಲ್ ಖತ್ತಾಬ್(ರ)ರವರು ಅವರನ್ನು ವಂಚಿಸಿದರು ಎಂಬ ಶಿಯಾಗಳ ಮತ್ತು ಅವರನ್ನು ಅನುಸರಿಸಿದವರ ವಾದ ಅವಿಶ್ವಾಸವಾಗಿದೆ.

ನಾವು ವಿಶ್ವಾಸವಿಡುತ್ತೇವೆ.[42]

ಅಲ್ಲಾಹನ ಆಜ್ಞೆಯು ಆಗಮಿಸುವವರೆಗೆ ಈ ಸಮುದಾಯದ ಪೈಕಿ ಒಂದು ಪಂಗಡವು ಸದಾ ಸತ್ಯದ ಮೇಲೆ ಅಚಲವಾಗಿ ನೆಲೆನಿಲ್ಲಲಿದೆ. ಆಕ್ಷೇಪಿಸುವವನ ಅಥವಾ ವಿರೋಧಿಸುವವನ ಯಾವ ವಿರೋಧವೂ ಅವರಿಗೆ ಹಾನಿಯನ್ನುಂಟು ಮಾಡಲಾರದು ಎಂದು ನಾವು ವಿಶ್ವಾಸವಿಡುತ್ತೇವೆ.[43]

ಸಹಾಬಾಗಳ (ಅವರ ಕುರಿತು ಅಲ್ಲಾಹು ತೃಪ್ತಿಪಡಲಿ) ನಡುವೆ ಜರುಗಿದ ಪರೀಕ್ಷಣೆಗಳ ಕುರಿತು ನಮ್ಮ ವಿಶ್ವಾಸವೇನೆಂದರೆ ಅದು ಅವರ ವ್ಯತ್ಯಸ್ತ ಸಂಶೋಧನೆಯಿಂದಾಗಿ ಉದ್ಭವಿಸಿದ್ದಾಗಿದೆ. ಅವರ ಪೈಕಿ ಸರಿಯಾದ ವೀಕ್ಷಣೆಯನ್ನು ಹೊಂದಿದವನಿಗೆ ಎರಡು ಪ್ರತಿಫಲಗಳಿವೆ ಮತ್ತು ಪ್ರಮಾದ ಸಂಭವಿಸಿದವನಿಗೆ ಒಂದು ಪ್ರತಿಫಲವಿದೆ ಹಾಗೂ ಅವರ ಪ್ರಮಾದವು ಅವರಿಗೆ ಕ್ಷಮಿಸಲ್ಪಟ್ಟಿದೆ.

ನಮ್ಮ ಅಭಿಪ್ರಾಯದ ಪ್ರಕಾರ ಸಹಾಬಾಗಳನ್ನು ತುಚ್ಛೀಕರಿಸುವುದರಿಂದ ನಾವು ದೂರಸರಿಯಬೇಕಾಗಿದೆ. ಅವರಿಗೆ ಹೊಂದಿಕೆಯಾಗುವ ಸುಂದರವಾದ ಪ್ರಶಂಸೆಯ ಮೂಲಕವಲ್ಲದೆ ಅವರನ್ನು ನಾವು ಸ್ಮರಿಸಬಾರದು. ಅವರ ಮೇಲಿರುವ ಎಲ್ಲ ದ್ವೇಷ, ಅಸೂಯೆಗಳಿಂದ ನಮ್ಮ ಹೃದಯಗಳನ್ನು ಶುದ್ಧೀಕರಿಸಬೇಕಾಗಿದೆ.[44] ಯಾಕೆಂದರೆ ಅಲ್ಲಾಹು ಹೇಳಿದ್ದಾನೆ:

﴿لَا يَسْتَوِى مِنكُم مَّنْ أَنفَقَ مِن قَبْلِ ٱلْفَتْحِ وَقَـٰتَلَ ۚ أُو۟لَـٰٓئِكَ أَعْظَمُ دَرَجَةً مِّنَ ٱلَّذِينَ أَنفَقُوا۟ مِنۢ بَعْدُ وَقَـٰتَلُوا۟ ۚ وَكُلًّا وَعَدَ ٱللَّهُ ٱلْحُسْنَىٰ ۚ﴾

**“ನಿಮ್ಮ ಪೈಕಿ (ಮಕ್ಕಾ) ವಿಜಯಕ್ಕೆ ಮುಂಚಿತವಾಗಿ ವ್ಯಯಿಸಿದವರು ಮತ್ತು ಹೋರಾಡಿದವರು (ಮತ್ತು ಆ ರೀತಿ ಮಾಡದವರು) ಸಮಾನರಲ್ಲ. (ಮಕ್ಕಾ ವಿಜಯದ) ನಂತರ ವ್ಯಯಿಸಿದವರು ಮತ್ತು ಹೋರಾಡಿದವರಿಗಿಂತಲೂ ಅವರು ಉನ್ನತ ಪದವಿಗಳನ್ನು ಹೊಂದಿದ್ದಾರೆ. ಅಲ್ಲಾಹು ಎಲ್ಲರಿಗೂ ಉತ್ತಮ ವಾಗ್ದಾನವನ್ನು ನೀಡಿದ್ದಾನೆ.”** (ಕುರ್‌ಆನ್ 57/10)

---

**42**. ನೋಡಿ: ‘ಸಹೀಹುಲ್ ಬುಖಾರಿ’ (2/938; ಹದೀಸ್ ನಂ. 2508) ಮತ್ತು ‘ಸಹೀಹ್ ಮುಸ್ಲಿಮ್’ (4/1962; ಹದೀಸ್ ನಂ. 2533).

**43**. ನೋಡಿ: ‘ಸಹೀಹುಲ್ ಬುಖಾರಿ’ (6/2667; ಹದೀಸ್ ನಂ. 6881) ಮತ್ತು ‘ಸಹೀಹ್ ಮುಸ್ಲಿಮ್’ (3/1523; ಹದೀಸ್ ನಂ. 1920).

**44**. ಸಹಾಬಾ ಕಿರಾಮ್‌ಗಳ ಪೈಕಿ ಕೆಲವರನ್ನು ಅಂದರೆ ಅಬೂಬಕ್ರ್ ಅಸ್ಸಿದ್ದೀಕ್(رضي الله عنه), ಉಮರ್ ಇಬ್ನುಲ್ ಖತ್ತಾಬ್(رضي الله عنه), ಉಸ್ಮಾನ್ ಇಬ್ನ್ ಅಫ್ಫಾನ್(رضي الله عنه), ಆಇಶಾ ಉಮ್ಮುಲ್ ಮುಅ್‌ಮಿನೀನ್(رضي الله عنها), ಮುಆವಿಯಃ ಇಬ್ನ್ ಅಬೀ ಸುಫ್ಯಾನ್(رضي الله عنه) ಮೊದಲಾದವರ ಕುರಿತು ತುಚ್ಛವಾಗಿ ಮಾತನಾಡುವ, ಅವರನ್ನು ಶಪಿಸುವ ಶಿಯಾಗಳೊಂದಿಗೆ ಮತ್ತು ಅಹ್ಲುಸ್ಸುನ್ನತ್ತಿನೊಳಗೆ ನುಸುಳಿಕೊಂಡಿರುವ ಅವರ ಹಿಂಬಾಲಕರೊಂದಿಗೆ, ಅವರು ಅದರಿಂದ ದೂರಸರಿಯುವ ತನಕ ನಾವು ಪೂರ್ಣ ವೈರತ್ವವನ್ನು ತೋರಬೇಕಾಗಿದೆ.

﴿وَالَّذِينَ جَاءُو مِنۢ بَعۡدِهِمۡ يَقُولُونَ رَبَّنَا ٱغۡفِرۡ لَنَا وَلِإِخۡوَٰنِنَا ٱلَّذِينَ
سَبَقُونَا بِٱلۡإِيمَٰنِ وَلَا تَجۡعَلۡ فِي قُلُوبِنَا غِلّٗا لِّلَّذِينَ ءَامَنُواْ رَبَّنَآ إِنَّكَ رَءُوفٞ رَّحِيمٌ ١٠﴾

"ಮತ್ತು ತದನಂತರ ಬಂದವರು ಹೇಳುವರು: ನಮ್ಮ ಪ್ರಭೂ! ನಮಗೆ ಮತ್ತು ವಿಶ್ವಾಸದೊಂದಿಗೆ ನಮಗಿಂತ ಮುಂಚಿತವಾಗಿ ಧಾವಿಸಿದವರಿಗೆ ಕ್ಷಮೆ ನೀಡು. ವಿಶ್ವಾಸಿಗಳ ಕುರಿತು ನಮ್ಮ ಹೃದಯಗಳಲ್ಲಿ ಅಸೂಯೆಯನ್ನಿಡದಿರು. ನಮ್ಮ ಪ್ರಭೂ! ಖಂಡಿತವಾಗಿಯೂ ನೀನು ಅತ್ಯಂತ ದಯಾಳುವೂ, ಕರುಣಾಮಯಿಯೂ ಆಗಿರುವೆ." (ಕುರ್‌ಆನ್ 59/10)

# الإيمـان باليوم الآخـر
## ಅಂತ್ಯದಿನದಲ್ಲಿರುವ ವಿಶ್ವಾಸ

ನಾವು ಅಂತ್ಯದಿನದಲ್ಲಿ ವಿಶ್ವಾಸವಿಡುತ್ತೇವೆ. ಅದು ದಿನಗಳಲ್ಲೇ ಕೊನೆಯದ್ದಾಗಿದೆ. ಅದರ ನಂತರ ಬೇರೊಂದು ದಿನವಿಲ್ಲ. ಅಂದು ಜನರನ್ನು ಶಾಶ್ವತ ಜೀವನಕ್ಕಾಗಿ ಪುನರುತ್ಥಾನಗೊಳಿಸಲಾಗುತ್ತದೆ –ಒಂದೋ ಸುಖಸುಪ್ಪತ್ತಿಗೆಯಿಂದ ಕಂಗೊಳಿಸುವ ಭವನಕ್ಕಾಗಿ ಅಥವಾ ಯಾತನಾಮಯ ಶಿಕ್ಷೆಯಿಂದ ಕೂಡಿದ ಭವನಕ್ಕಾಗಿ!

ನಾವು ಪುನರುತ್ಥಾನದಲ್ಲಿ ವಿಶ್ವಾಸವಿಡುತ್ತೇವೆ. ಅದು ಅಲ್ಲಾಹು ಮರಣಹೊಂದಿದವರನ್ನು ಜೀವಂತಗೊಳಿಸುವುದಾಗಿದೆ. ಇಸ್ರಾಫೀಲ್ ಕಹಳೆಯಲ್ಲಿ ಎರಡನೆ ಬಾರಿ ಊದುವಾಗ ಇದು ಸಂಭವಿಸುತ್ತದೆ.

﴿وَنُفِخَ فِى ٱلصُّورِ فَصَعِقَ مَن فِى ٱلسَّمَٰوَٰتِ وَمَن فِى ٱلْأَرْضِ إِلَّا مَن شَآءَ ٱللَّهُ ۖ ثُمَّ نُفِخَ فِيهِ أُخْرَىٰ فَإِذَا هُمْ قِيَامٌ يَنظُرُونَ ﴿٦٨﴾﴾

**“ಮತ್ತು ಕಹಳೆಯಲ್ಲಿ ಊದಲಾದಾಗ ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವವರೆಲ್ಲರೂ ಮೃತರಾಗಿ ಬೀಳುವರು– ಅಲ್ಲಾಹು ಇಚ್ಛಿಸಿದವರ ಹೊರತು. ತರುವಾಯ ಎರಡನೆ ಬಾರಿಗೆ ಊದಲಾದಾಗ ಅವರೆಲ್ಲರೂ ದಿಟ್ಟಿಸಿ ನೋಡುತ್ತಾ ಎದ್ದೇಳುವರು.”** (ಕುರ್‌ಆನ್ 39/68)

ಹಾಗೆ ಜನರು ತಮ್ಮ ಗೋರಿಗಳಿಂದ, ಪಾದರಕ್ಷೆಗಳಿಲ್ಲದೆ ಬರಿಗಾಲುಗಳಲ್ಲಿ, ಉಡುಪುಗಳಿಲ್ಲದೆ ನಗ್ನರಾಗಿ ಮತ್ತು ಮುಂಜಿ ಮಾಡಿರದ ಸ್ಥಿತಿಯಲ್ಲಿ ಜಗತ್ತಿನ ಪ್ರಭುವಿನೆಡೆಗೆ ಎದ್ದು ನಿಲ್ಲುವರು.[45]

﴿كَمَا بَدَأْنَآ أَوَّلَ خَلْقٍ نُّعِيدُهُۥ ۚ وَعْدًا عَلَيْنَآ ۚ إِنَّا كُنَّا فَٰعِلِينَ ﴿١٠٤﴾﴾

**“ಹಾಗೆ ನಾವು ಮೊದಲ ಸೃಷ್ಟಿಯನ್ನು ಆರಂಭಿಸಿದಂತೆಯೇ ಅದನ್ನು ಪುನರಾವರ್ತಿಸುವೆವು. ಅದು ನಮ್ಮ ವತಿಯ ವಾಗ್ದಾನವಾಗಿದೆ ಮತ್ತು ಖಂಡಿತವಾಗಿಯೂ ನಾವದನ್ನು ಪಾಲಿಸುವೆವು.”** (ಕುರ್‌ಆನ್ 21/104)

ಬಲಗೈಯಲ್ಲಿ ನೀಡಲಾಗುವ ಅಥವಾ ಬೆನ್ನ ಹಿಂಭಾಗದಿಂದ ಎಡಗೈಯಲ್ಲಿ ನೀಡಲಾಗುವ ಕರ್ಮದಾಖಲೆಗಳಲ್ಲಿ ನಾವು ವಿಶ್ವಾಸವಿಡುತ್ತೇವೆ.

﴿فَأَمَّا مَنْ أُوتِىَ كِتَٰبَهُۥ بِيَمِينِهِۦ ﴿٧﴾ فَسَوْفَ يُحَاسَبُ حِسَابًا يَسِيرًا ﴿٨﴾ وَيَنقَلِبُ إِلَىٰٓ

**45**. ನೋಡಿ: ‘ಸಹೀಹುಲ್ ಬುಖಾರಿ’ (3/1222; ಹದೀಸ್ ನಂ. 3171) ಮತ್ತು ‘ಸಹೀಹ್ ಮುಸ್ಲಿಮ್’ (4/2194; ಹದೀಸ್ ನಂ. 2860).

أَهْلِهِۦ مَسْرُورًا ﴿٩﴾ وَأَمَّا مَنْ أُوتِىَ كِتَٰبَهُۥ وَرَآءَ ظَهْرِهِۦ ﴿١٠﴾ فَسَوْفَ يَدْعُوا۟ ثُبُورًا ﴿١١﴾ وَيَصْلَىٰ سَعِيرًا ﴿١٢﴾﴾

**"ನಂತರ ಯಾರಿಗೆ ಅವನ ದಾಖಲೆಯನ್ನು ಅವನ ಬಲಗೈಯಲ್ಲಿ ನೀಡಲಾಗುತ್ತದೋ ಖಂಡಿತವಾಗಿಯೂ ಅವನನ್ನು ಸರಳವಾಗಿ ವಿಚಾರಣೆ ಮಾಡಲಾಗುವುದು[46] ಮತ್ತು ಅವನು ತನ್ನ ಕುಟುಂಬದೆಡೆಗೆ ಹರ್ಷಚಿತ್ತನಾಗಿ ಮರಳುವನು. ಮತ್ತು ಯಾರಿಗೆ ಅವನ ದಾಖಲೆಯನ್ನು ಅವನ ಬೆನ್ನ ಹಿಂಭಾಗದಿಂದ ನೀಡಲಾಗುವುದೋ ಅವನು ವಿನಾಶಕ್ಕಾಗಿ ಅರಚುವನು ಮತ್ತು ಹೊತ್ತಿಜ್ವಲಿಸುವ ನರಕಾಗ್ನಿಯನ್ನು ಪ್ರವೇಶಿಸುವನು."** (ಕುರ್‌ಆನ್ 84/7–12)

﴿ وَكُلَّ إِنسَٰنٍ أَلْزَمْنَٰهُ طَٰٓئِرَهُۥ فِى عُنُقِهِۦ ۖ وَنُخْرِجُ لَهُۥ يَوْمَ ٱلْقِيَٰمَةِ كِتَٰبًا يَلْقَىٰهُ مَنشُورًا ﴿١٣﴾ ٱقْرَأْ كِتَٰبَكَ كَفَىٰ بِنَفْسِكَ ٱلْيَوْمَ عَلَيْكَ حَسِيبًا ﴿١٤﴾﴾

**"ಮತ್ತು ಪ್ರತಿಯೊಬ್ಬ ವ್ಯಕ್ತಿಗೂ ಅವನ ಕರ್ಮಗಳನ್ನು ಅವನ ಕತ್ತಿನ ಸುತ್ತ ನಾವು ಬಂಧಿಸಿದ್ದೇವೆ. ಮತ್ತು ವಿಚಾರಣೆಯ ದಿನದಂದು ನಾವು ಅವನಿಗೋಸ್ಕರ ಒಂದು ಗ್ರಂಥವನ್ನು ಹೊರತರುವೆವು. ಆ ಗ್ರಂಥವು ತೆರೆದಿಟ್ಟದ್ದಾಗಿ ಅವನು ಕಾಣುವನು. (ಮತ್ತು ಹೀಗೆ ಹೇಳಲಾಗುವುದು): 'ನಿನ್ನ ಗ್ರಂಥವನ್ನು ಓದಿಕೋ! ಮತ್ತು ಇಂದು ನಿನ್ನ ಶರೀರವೇ ನಿನಗೆ ವಿರುದ್ಧವಾಗಿ ನಿನ್ನನ್ನು ವಿಚಾರಣೆ ನಡೆಸಲು ಪರ್ಯಾಪ್ತವಾಗಿದೆ'."** (ಕುರ್‌ಆನ್ 17/13–14)

ಪುನರುತ್ಥಾನ ದಿನದಂದು ಸ್ಥಾಪಿಸಲಾಗುವ ತಕ್ಕಡಿಗಳಲ್ಲಿ ನಾವು ವಿಶ್ವಾಸವಿಡುತ್ತೇವೆ. ಆದ್ದರಿಂದ ಯಾವ ವ್ಯಕ್ತಿಯ ಮೇಲೂ ಕಿಂಚಿತ್ತೂ ಅನ್ಯಾಯವೆಸಗಲಾರದು.

﴿ فَمَن يَعْمَلْ مِثْقَالَ ذَرَّةٍ خَيْرًا يَرَهُۥ ﴿٧﴾ وَمَن يَعْمَلْ مِثْقَالَ ذَرَّةٍ شَرًّا يَرَهُۥ ﴿٨﴾﴾

**"ಆದ್ದರಿಂದ ಯಾರು ಒಂದು ಅಣುವಿನಷ್ಟು ತೂಕದ ಒಳಿತನ್ನು ಮಾಡುತ್ತಾನೋ ಅವನದನ್ನು ಕಾಣುವನು. ಮತ್ತು ಯಾರು ಒಂದು ಅಣುವಿನಷ್ಟು ತೂಕದ ಕೆಡುಕನ್ನು**

---

**46**. ಆಇಶಾ(ﷺ)ರವರು ತಮಗೆ ಅರ್ಥವಾಗದ ವಿಷಯವನ್ನು ಆಲಿಸಿದೊಡನೆ ಅದರ ಕುರಿತು ಪ್ರವಾದಿ (ﷺ)ರವರೊಂದಿಗೆ ಅದು ಅರ್ಥವಾಗುವ ತನಕ ಅವಲೋಕನ ಮಾಡುತ್ತಿದ್ದರು. ಒಮ್ಮೆ ಪ್ರವಾದಿ(ﷺ) ರವರು ಹೇಳಿದರು: ಯಾರನ್ನು ವಿಚಾರಣೆ ನಡೆಸಲಾಗುವುದೋ ಅವನನ್ನು ಶಿಕ್ಷಿಸಲಾಗುವುದು. ಆಗ ಆಇಶಾ(ﷺ)ರವರು ಕೇಳಿದರು: ಅವನನ್ನು ಸರಳವಾಗಿ ವಿಚಾರಣೆ ಮಾಡಲಾಗುವುದೆಂದು ಅಲ್ಲಾಹು ಹೇಳಿದ್ದಾನಲ್ಲವೇ? ಆಗ ಪ್ರವಾದಿ(ﷺ)ರವರು ಹೇಳಿದರು: ಅದು ಕೇವಲ ಒಂದು ನೋಟವನ್ನು ಬೀರುವುದು ಮಾತ್ರ. ಆದರೆ ಯಾರನ್ನು ಕೂಲಂಕುಶವಾಗಿ ವಿಚಾರಣೆ ಮಾಡಲಾಗುವುದೋ ಅವನು ನಾಶವಾಗಿ ಹೋದನು. (ಸಹೀಹುಲ್ ಬುಖಾರಿ 1/51; ಹದೀಸ್ ನಂ. 103 ಮತ್ತು ಸಹೀಹ್ ಮುಸ್ಲಿಮ್ 4/2204; ಹದೀಸ್ ನಂ. 2876).

**ಮಾಡುತ್ತಾನೋ ಅವನದನ್ನು ಕಾಣುವನು.”** (ಕುರ್‌ಆನ್ 99/7–8)

﴿ فَمَن ثَقُلَتْ مَوَٰزِينُهُۥ فَأُو۟لَـٰٓئِكَ هُمُ ٱلْمُفْلِحُونَ ﴿١٠٢﴾ وَمَنْ خَفَّتْ مَوَٰزِينُهُۥ فَأُو۟لَـٰٓئِكَ ٱلَّذِينَ خَسِرُوٓا۟ أَنفُسَهُمْ فِى جَهَنَّمَ خَـٰلِدُونَ ﴿١٠٣﴾ تَلْفَحُ وُجُوهَهُمُ ٱلنَّارُ وَهُمْ فِيهَا كَـٰلِحُونَ ﴿١٠٤﴾ ﴾

**“ಮತ್ತು ಯಾರ ತಕ್ಕಡಿಗಳು ಭಾರವಾಗುತ್ತದೋ ಅವರೇ ಯಶಸ್ಸನ್ನು ಗಳಿಸಿದವರು. ಮತ್ತು ಯಾರ ತಕ್ಕಡಿಗಳು ಹಗುರವಾಗುತ್ತದೋ ಅವರೇ ತಮ್ಮ ಶರೀರಗಳನ್ನು ನಾಶಗೊಳಿಸಿದವರು. ಅವರು ನರಕಾಗ್ನಿಯಲ್ಲಿ ಶಾಶ್ವತವಾಗಿ ವಾಸಿಸುವರು. ಅಗ್ನಿಯು ಅವರ ಮುಖಗಳನ್ನು ಕರಟಿಹಾಕಲಿದೆ ಮತ್ತು ವಿರೂಪಗೊಂಡ ತುಟಿಗಳಿಂದ ಅವರು ಹಲ್ಲುಕಿರಿಯುತ್ತಿರುವರು.”** (ಕುರ್‌ಆನ್ 23/102–104)

﴿ مَن جَآءَ بِٱلْحَسَنَةِ فَلَهُۥ عَشْرُ أَمْثَالِهَا ۖ وَمَن جَآءَ بِٱلسَّيِّئَةِ فَلَا يُجْزَىٰٓ إِلَّا مِثْلَهَا وَهُمْ لَا يُظْلَمُونَ ﴿١٦٠﴾ ﴾

**“ಯಾರು ಒಂದು ಒಳಿತಿನೊಂದಿಗೆ ಆಗಮಿಸುತ್ತಾನೋ ಅವನಿಗೆ ಅದರ ಹತ್ತು ಪಟ್ಟು ಪ್ರತಿಫಲವನ್ನು ನೀಡಲಾಗುವುದು. ಮತ್ತು ಯಾರು ಒಂದು ಕೆಡುಕಿನೊಂದಿಗೆ ಆಗಮಿಸುತ್ತಾನೋ ಅವನಿಗೆ ಅದರಷ್ಟೇ ಹೊರತು ಪ್ರತಿಫಲ ನೀಡಲಾಗದು. ಮತ್ತು ಅವರ ಮೇಲೆ ಅನ್ಯಾಯವೆಸಗಲಾರದು.”** (ಕುರ್‌ಆನ್ 6/160)

ಪ್ರವಾದಿ(ﷺ)ರವರಿಗೆ ಮಾತ್ರ ವಿಶೇಷವಾಗಿ ಇರುವಂತಹ ‘ಅತಿದೊಡ್ಡ ಶಫಾಅತ್’ನಲ್ಲಿ ನಾವು ವಿಶ್ವಾಸವಿಡುತ್ತೇವೆ. ಅದು ಜನರು ತಮ್ಮ ದುಃಖ ಮತ್ತು ತಳಮಳಗಳು ಸಹಿಸಲಸಾಧ್ಯವಾದಾಗ ಅವರು ಆದಮರೆಡೆಗೆ, ನಂತರ ನೂಹರೆಡೆಗೆ, ನಂತರ ಇಬ್ರಾಹೀಮರೆಡೆಗೆ, ನಂತರ ಮೂಸಾರೆಡೆಗೆ, ನಂತರ ಈಸಾರೆಡೆಗೆ ತೆರಳಿ ಕೊನೆಗೆ ಪ್ರವಾದಿ(ﷺ)ರವರ ಬಳಿಗೆ ಆಗಮಿಸುವಾಗ, ಅಲ್ಲಾಹು ತನ್ನ ದಾಸರ ನಡುವೆ ತೀರ್ಪು ನೀಡುವುದಕ್ಕಾಗಿ ಅಲ್ಲಾಹನ ಅನುಮತಿಯೊಂದಿಗೆ ಅವನ ಬಳಿ ಪ್ರವಾದಿ(ﷺ) ರವರು ನಡೆಸುವ ಶಿಫಾರಸ್ಸಾಗಿದೆ.[47]

ನರಕ ಪ್ರವೇಶಗೊಂಡ ವಿಶ್ವಾಸಿಗಳನ್ನು ಅದರಿಂದ ಹೊರತರುವುದಕ್ಕಾಗಿರುವ ಶಫಾಅತ್ತಿನಲ್ಲಿ ನಾವು ವಿಶ್ವಾಸವಿಡುತ್ತೇವೆ. ಈ ಶಫಾಅತ್ ಪ್ರವಾದಿ(ﷺ)ರವರಿಗೂ, ಇತರ ಪ್ರವಾದಿಗಳಿಗೂ, ವಿಶ್ವಾಸಿಗಳಿಗೂ, ಮಲಕ್‌ಗಳಿಗೂ ಇರಲಿದೆ.

ಯಾವ ಶಫಾಅತ್ ಕೂಡ ಇಲ್ಲದೆ ಅಲ್ಲಾಹು ವಿಶ್ವಾಸಿಗಳ ಪೈಕಿ ಕೆಲವರನ್ನು ನರಕದಿಂದ ಪಾರುಮಾಡುವನು ಎಂದು ನಾವು ವಿಶ್ವಾಸವಿಡುತ್ತೇವೆ. ಇದು ಅಲ್ಲಾಹನ

---

**47**. ನೋಡಿ: ‘ಸಹೀಹುಲ್ ಬುಖಾರಿ’ (3/1215; ಹದೀಸ್ ನಂ. 3162) ಮತ್ತು ‘ಸಹೀಹ್ ಮುಸ್ಲಿಮ್’ (1/184; ಹದೀಸ್ ನಂ. 194)

ಔದಾರ್ಯ ಮತ್ತು ಕರುಣೆಯಿಂದಾಗಿದೆ.[48]

ಪ್ರವಾದಿ(ﷺ)ರವರಿಗಿರುವ **'ಹೌದ್'** (ಕೊಳ)ದಲ್ಲಿ ನಾವು ವಿಶ್ವಾಸವಿಡುತ್ತೇವೆ. ಅದರ ನೀರು ಹಾಲಿಗಿಂತಲೂ ಬೆಳ್ಳಗಿದೆ, ಜೇನಿಗಿಂತಲೂ ಸವಿಯಾಗಿದೆ, ಕಸ್ತೂರಿಯ ಸುವಾಸನೆಗಿಂತಲೂ ಪರಿಮಳಯುಕ್ತವಾಗಿದೆ, ಅದರ ಉದ್ದವು ತಿಂಗಳ ಪ್ರಯಾಣದಷ್ಟಿದೆ, ಅಗಲವು ಕೂಡ ತಿಂಗಳ ಪ್ರಯಾಣದಷ್ಟಿದೆ, ಅದರಲ್ಲಿರುವ ಪಾತ್ರೆಗಳು ಬಾನಲ್ಲಿರುವ ತಾರೆಗಳಂತೆ ಸುಂದರವೂ ಅಸಂಖ್ಯವೂ ಆಗಿವೆ. ತಮ್ಮ ಸಮುದಾಯದ ಪೈಕಿ

---

**48**. 'ತನ್ಬೀಹಾತುಲ್ಲತೀಫಃ' ಎಂಬ ಗ್ರಂಥಕ್ಕೆ ಬರೆದ ಟಿಪ್ಪಣಿಯಲ್ಲಿ (ಪುಟ 73) ಶೈಖ್ ಇಬ್ನ್ ಬಾಝ್ ಹೇಳಿದ್ದಾರೆ: 'ಶರೀಅತ್ತಿನ ಪುರಾವೆಗಳಿಂದ ಸ್ಪಷ್ಟವಾಗಿ ತಿಳಿದುಬಂದಿರುವ ಪ್ರಕಾರ ಅಂತ್ಯದಿನದಂದು ಜರಗುವ ಶಫಾಅತ್‌ಗಳ ಒಟ್ಟು ಸಂಖ್ಯೆ ಆರು. ಅವುಗಳ ಪೈಕಿ ಮೂರು ಶಫಾಅತ್‌ಗಳು ವಿಶೇಷವಾಗಿ ಪ್ರವಾದಿ(ﷺ)ರವರಿಗೆ ಮಾತ್ರ ಇರುವುದಾಗಿದೆ. ಆ ಆರು ಶಫಾಅತ್‌ಗಳು ಹೀಗಿವೆ:

ಒಂದು: ವಿಚಾರಣೆಗಾಗಿ ಕಾದಿರುವ ಜನರನ್ನು ವಿಚಾರಣೆಗೆ ತೆಗೆಯಬೇಕೆಂದು ಬೇಡುವ ಅತಿದೊಡ್ಡ ಶಫಾಅತ್ (ಅಶ್ಶಫಾಅತುಲ್ ಉದ್ಮಾ).

ಎರಡು: ಸ್ವರ್ಗವಾಸಿಗಳು ಸ್ವರ್ಗವನ್ನು ಪ್ರವೇಶಿಸುವುದಕ್ಕಾಗಿ ಮಾಡುವ ಶಫಾಅತ್.

ಮೂರು: ಪ್ರವಾದಿ(ﷺ)ರವರು ತಮ್ಮ ಚಿಕ್ಕಪ್ಪರಾದ ಅಬೂ ತಾಲಿಬ್‌ರಿಗೆ ಶಿಕ್ಷೆಯನ್ನು ಹಗುರಗೊಳಿಸಬೇಕೆಂದು ಮತ್ತು ನರಕಾಗ್ನಿಯ ಆಳ ಕಡಿಮೆಯಿರುವ ಸ್ಥಳದಲ್ಲಿ ಅವರನ್ನು ಇಡಬೇಕೆಂದು ಬೇಡುವ ಶಫಾಅತ್. ಈ ಶಫಾಅತ್ ಪ್ರವಾದಿ(ﷺ) ಮತ್ತು ಅವರ ಚಿಕ್ಕಪ್ಪ ಅಬೂತಾಲಿಬ್‌ರ ಮಧ್ಯೆ ಮಾತ್ರ ಇರುವುದಾಗಿದೆ. ಅಬೂ ತಾಲಿಬ್‌ರ ಹೊರತಾದ ಇತರ ಅವಿಶ್ವಾಸಿಗಳ ಕುರಿತು ಹೇಳುವುದಾದರೆ ಅವರಿಗೆ ಯಾವ ಶಫಾಅತ್ ಕೂಡ ಪ್ರಯೋಜನವಾಗುವುದಿಲ್ಲ. ಯಾಕೆಂದರೆ ಅಲ್ಲಾಹು ಹೇಳಿದ್ದಾನೆ: 'ಶಫಾಅತ್ ಮಾಡುವವರ ಯಾವ ಶಫಾಅತ್ ಕೂಡ ಅವರಿಗೆ (ಅವಿಶ್ವಾಸಿಗಳಿಗೆ) ಪ್ರಯೋಜನವಾಗಲಾರದು.' (ಕುರ್‌ಆನ್ 74/48)

ನಾಲ್ಕು: ನರಕಾಗ್ನಿಗೆ ಅರ್ಹವಾಗಿರುವವರು ಅದನ್ನು ಪ್ರವೇಶಿಸದಂತೆ ಮಾಡುವ ಶಫಾಅತ್.

ಐದು: ನರಕಾಗ್ನಿ ಪ್ರವೇಶಿಸಿದವರನ್ನು ಅದರಿಂದ ಹೊರತರಲು ಮಾಡುವ ಶಫಾಅತ್. ಈ ಎರಡು ಶಫಾಅತ್‌ಗಳು ಪ್ರವಾದಿ(ﷺ)ರಿಗೆ, ಇತರ ಅಂಬಿಯಾಗಳಿಗೆ ಮತ್ತು ಸಾಲಿಹೀನ್‌ಗಳಿಗೆ ಇರಲಿವೆ.

ಆರು: ಸ್ವರ್ಗವಾಸಿಗಳ ಪದವಿಗಳನ್ನು ಉನ್ನತವಾಗಿಸಲು ಮಾಡುವ ಶಫಾಅತ್. ಈ ಕೊನೆಯ ಶಫಾಅತ್ ಪ್ರವಾದಿ(ﷺ)ರಿಗೆ, ಸಜ್ಜನರಿಗೆ, ಮಲಕ್‌ಗಳಿಗೆ ಮತ್ತು ಶೈಶವಾವಸ್ಥೆಯಲ್ಲಿ ಮರಣಹೊಂದಿದ ಮುಸ್ಲಿಮ್ ಮಕ್ಕಳಿಗೆ ಇರಲಿದೆ.

ಈ ಎಲ್ಲ ಶಫಾಅತ್‌ಗಳೂ ಕೇವಲ ತೌಹೀದ್‌ನಲ್ಲಿರುವ ಜನರಿಗೆ ಮಾತ್ರ ಪ್ರಯೋಜನಪಡುತ್ತದೆ. ಅವಿಶ್ವಾಸಿಗಳ ಕುರಿತು ಹೇಳುವುದಾದರೆ ಅವರು ನರಕಾಗ್ನಿಯನ್ನು ಪ್ರವೇಶಿಸುವರು. ಆದರೆ ಅಲ್ಲಿ ಅವರು ಮರಣದ ರುಚಿಯನ್ನು ಸವಿಯುವುದಿಲ್ಲ. (ಅಂದರೆ ಅವರಲ್ಲಿ ಮರಣಹೊಂದುವುದಿಲ್ಲ). ಈ ಆಯತ್ತಿನಲ್ಲಿ ಮತ್ತು ಇದರಂತಿರುವ ಆಯತ್‌ಗಳಲ್ಲಿ ಅಲ್ಲಾಹು ಹೇಳಿದಂತೆ: 'ಅವರ ಮೇಲೆ ಮರಣವನ್ನು ವಿಧಿಸಲಾಗುವುದಿಲ್ಲ. ಆದ್ದರಿಂದ ಅವರು ಮರಣಹೊಂದುವುದಿಲ್ಲ. (35/36)' ಆದರೆ ತೌಹೀದ್‌ನಲ್ಲಿರುವ ಜನರ ಪೈಕಿ ಧಿಕ್ಕಾರಿಗಳು ಅದನ್ನು ಪ್ರವೇಶಿಸಿದರೆ ಅವರು ಅದರಲ್ಲಿ ಶಾಶ್ವತವಾಗಿ ಉಳಿಯುವುದಿಲ್ಲ. ಅವರನ್ನು ಶುದ್ಧೀಕರಿಸಿದ ಮತ್ತು ಸಂಸ್ಕರಿಸಿದ ಬಳಿಕ ಅವರು ಅದರಿಂದ ಹೊರಬರುವರು. ಸಹೀಹ್‌ನಲ್ಲಿ ಸಾಬೀತಾಗಿರುವಂತೆ ಅಬೂ ಸಈದ್ ಅಲ್‌ಖುದ್ರೀ ವರದಿ ಮಾಡಿದ ಹದೀಸೊಂದರಲ್ಲಿ ಪ್ರವಾದಿ(ﷺ) ರವರು ಹೇಳಿದರು: 'ನರಕವಾಸಿಗಳಾಗಿರುವ ನರಕಾಗ್ನಿಯ ಜನರ ಕುರಿತು ಹೇಳುವುದಾದರೆ ಅವರು ಅದರಲ್ಲಿ ಜೀವಿಸುವುದೂ ಇಲ್ಲ, ಮರಣ ಹೊಂದುವುದೂ ಇಲ್ಲ. ಆದರೆ ತಮ್ಮ ಕೆಲವು ಪಾಪಗಳಿಂದಾಗಿ ನರಕಾಗ್ನಿ ಪ್ರವೇಶಿಸಬೇಕಾಗಿ ಬಂದ ಜನರು ಯಾರೋ ಅವರು ಸುಟ್ಟು ಕರಕಲಾಗಿ ಇದ್ದಿಲಿನಂತಾದ ಬಳಿಕ ಅವರು ಮರಣಹೊಂದುವರು. ತರುವಾಯ ಅವರಿಗೋಸ್ಕರ ಶಫಾಅತ್ ಮಾಡುವ ಅನುಮತಿ ದೊರೆಯುತ್ತದೆ. ಹಾಗೆ ಅವರನ್ನು ಹೊತ್ತು ತಂದು ಸ್ವರ್ಗದ ನದಿಗಳಲ್ಲಿ ಹರಡಲಾಗುವುದು. ತರುವಾಯ ಹೇಳಲಾಗುವುದು: ಓ ಸ್ವರ್ಗದ ಜನರೇ! ಅವರ ಮೇಲೆ ಜೀವದ ನೀರನ್ನು ಸುರಿಯಿರಿ. ಹಾಗೆ ನದಿಯು ವಹಿಸುತ್ತಿರುವ ಬೀಜಗಳಿಂದ ಹುಟ್ಟು ಸಸ್ಯಗಳಂತೆ ಅವರು ಹುಟ್ಟಿಬರುವರು.' (ಮುಸ್ಲಿಮ್).'

ವಿಶ್ವಾಸಿಗಳಿಗೆ ಪ್ರವಾದಿ(ﷺ)ರವರು ಅದನ್ನು ಕುಡಿಸುವರು. ಅದರಿಂದ ಯಾರಾದರೂ ಕುಡಿದರೆ ಮತ್ತೆ ಅವನಿಗೆ ದಾಹವುಂಟಾಗಲಾರದು.[49]

ನರಕದ ಮೇಲೆ ಸ್ಥಾಪಿಸಲಾಗಿರುವ **'ಸಿರಾತ್'** (ಸೇತುವೆ)ನ ಮೇಲೆ ನಾವು ವಿಶ್ವಾಸವಿಡುತ್ತೇವೆ. ತಮ್ಮ ಕರ್ಮಗಳ ಪ್ರಮಾಣಕ್ಕೆ ಅನುಗುಣವಾಗಿ ಜನರು ಅದನ್ನು ದಾಟುವರು. ಅದನ್ನು ಮೊಟ್ಟಮೊದಲು ದಾಟುವವರು ಮಿಂಚಿನ ವೇಗದಲ್ಲಿ ದಾಟುವರು, ನಂತರ ದಾಟುವವರು ಗಾಳಿಯ ವೇಗದಲ್ಲಿ ದಾಟುವರು, ನಂತರ ದಾಟುವವರು ಹಕ್ಕಿ ಹಾರುವ ವೇಗದಲ್ಲಿ ದಾಟುವರು, ನಂತರ ದಾಟುವವರು ವೇಗವಾಗಿ ಓಡುವಷ್ಟು ವೇಗದಲ್ಲಿ ದಾಟುವರು. ಪ್ರವಾದಿ(ﷺ)ರವರು ಸಿರಾತ್‌ನಲ್ಲಿ ನಿಂತು **"ಓ ಪ್ರಭೂ! ಇವರನ್ನು ರಕ್ಷಿಸು, ಇವರನ್ನು ರಕ್ಷಿಸು"** ಎನ್ನುತ್ತಿರುವರು. ಹಾಗೆ ಕರ್ಮ ದೌರ್ಬಲ್ಯವಿರುವ ಜನರು ಅದನ್ನು ದಾಟತೊಡಗುವರು. ಅವರು ತೆವಳುತ್ತಾ ಸಾಗುವರು. ಸಿರಾತ್‌ನ ಎರಡೂ ಬದಿಗಳಲ್ಲಿ ಆಜ್ಞೆ ನೀಡಲಾಗಿರುವ ಕೊಕ್ಕೆಗಳಿರುವುವು. ಯಾರನ್ನು ಹಿಡಿಯಬೇಕೆಂದು ಅವುಗಳಿಗೆ ಆಜ್ಞೆ ನೀಡಲಾಗಿರುವುದೋ ಅವರನ್ನು ಅವು ಹಿಡಿಯುವುವು. ಹಾಗೆ ಅದರಿಂದ ಪರಚಲಾದವರು ಪಾರಾಗುವರು ಮತ್ತು ಅದಕ್ಕೆ ಸಿಲುಕಿಕೊಂಡವರು ನರಕಾಗ್ನಿಯನ್ನು ಸೇರುವರು.[50]

ಆ ದಿನದ ಕುರಿತು, ಅದರ ಪರೀಕ್ಷೆಗಳ ಕುರಿತು ಕುರ್‌ಆನ್ ಮತ್ತು ಸುನ್ನತ್‌ನಲ್ಲಿ ಏನೆಲ್ಲ ಬಂದಿವೆಯೋ ಅವೆಲ್ಲದರಲ್ಲಿಯೂ ನಾವು ವಿಶ್ವಾಸವಿಡುತ್ತೇವೆ. ಆ ದಿನದಲ್ಲಿ ಅಲ್ಲಾಹು ನಮಗೆ ಸಹಾಯ ಒದಗಿಸಲಿ.

ಸ್ವರ್ಗವಾಸಿಗಳು ಸ್ವರ್ಗವನ್ನು ಪ್ರವೇಶಿಸುವುದಕ್ಕಿರುವ ಪ್ರವಾದಿ(ﷺ)ರವರ ಶಫಾಅತ್‌ನಲ್ಲಿ ನಾವು ವಿಶ್ವಾಸವಿಡುತ್ತೇವೆ. ಇದು ಪ್ರವಾದಿ(ﷺ)ರಿಗೆ ಮಾತ್ರ ಇರುವ ವಿಶೇಷ ಶಫಾಅತ್ ಆಗಿದೆ.

ಸ್ವರ್ಗದಲ್ಲಿಯೂ ನರಕದಲ್ಲಿಯೂ ನಾವು ವಿಶ್ವಾಸವಿಡುತ್ತೇವೆ. ಸ್ವರ್ಗವು ಸುಖ ಸೌಕರ್ಯಗಳ ಬೀಡಾಗಿದೆ. ಭಯಭಕ್ತಿ ಪಾಲಿಸುವ ವಿಶ್ವಾಸಿಗಳಿಗಾಗಿ ಅಲ್ಲಾಹು ಅದನ್ನು ಸಿದ್ಧಗೊಳಿಸಿದ್ದಾನೆ. ಕಣ್ಣುಗಳು ಕಂಡಿರದ, ಕಿವಿಗಳು ಕೇಳಿರದ, ಮನುಷ್ಯ ಮನಸ್ಸಿನಲ್ಲಿ ಮೂಡಿರದ ಸುಖ ಸೌಕರ್ಯಗಳು ಅದರಲ್ಲಿವೆ.[51]

**49**. 'ಹೌದುಲ್ ಕೌಸರ್' ಎಂದು ಕರೆಯಲಾಗುವ ಈ ಕೊಳದ ಕುರಿತ ವಿವರಣೆಯು 'ಸಹೀಹುಲ್ ಬುಖಾರಿ' (5/2405; ಹದೀಸ್ ನಂ. 6208) ಮತ್ತು 'ಸಹೀಹ್ ಮುಸ್ಲಿಮ್' (4/1793; ಹದೀಸ್ ನಂ. 2292) ನಲ್ಲಿ ಕಾಣಬಹುದು.

**50**. ನೋಡಿ: 'ಸಹೀಹುಲ್ ಬುಖಾರಿ' (1/277; ಹದೀಸ್ ನಂ. 773) ಮತ್ತು 'ಸಹೀಹ್ ಮುಸ್ಲಿಮ್' (1/163; ಹದೀಸ್ ನಂ. 182) ವರದಿ ಮಾಡಿದ ಸುದೀರ್ಘ ಹದೀಸೊಂದರ ಭಾಗವಾಗಿದೆ ಇದು.

**51**. ನೋಡಿ: 'ಸಹೀಹುಲ್ ಬುಖಾರಿ' (3/1185; ಹದೀಸ್ ನಂ. 3244) ಮತ್ತು 'ಸಹೀಹ್ ಮುಸ್ಲಿಮ್' (4/2174; ಹದೀಸ್ ನಂ. 2824).
ಇಬ್ನ್ ಅಬ್ಬಾಸ್(رضي الله عنه)ರವರು ಹೇಳಿದ್ದಾಗಿ ಇಬ್ನ್ ಜರೀರ್ ಅತ್ತಬರೀ ತನ್ನ 'ತಫ್ಸೀರ್'ನಲ್ಲಿ (1/123) ಸಹೀಹಾದ ಸನದ್‌ನೊಂದಿಗೆ ಉದ್ಧರಿಸಿದ್ದಾರೆ: 'ಈ ಲೋಕದಲ್ಲಿ ಇರುವವುಗಳ ಹೊರತು ಬೇರೇನೂ ಸ್ವರ್ಗಲೋಕದಲ್ಲಿಲ್ಲ; ಆದರೆ ಕೇವಲ ಹೆಸರಿನಲ್ಲಿ ಮಾತ್ರ.'
ಈ ವರದಿಯನ್ನು ಉಲ್ಲೇಖಿಸಿದ ಬಳಿಕ ಶೈಖ್ ಉಸೈಮೀನ್‌ರವರು ತನ್ನ 'ಫತ್‌ಹು ರಬ್ಬಿಲ್ ಬರಿಯ್ಯಃ'ದಲ್ಲಿ

﴿ فَلَا تَعْلَمُ نَفْسٌ مَّآ أُخْفِىَ لَهُم مِّن قُرَّةِ أَعْيُنٍ جَزَآءًۢ بِمَا كَانُوا۟ يَعْمَلُونَ ﴿١٧﴾ ﴾

**“ಯಾವೆಲ್ಲ ಸುಖ ಸೌಕರ್ಯಗಳು ತಮ್ಮಿಂದ ಮರೆಯಾಗಿವೆಯೆಂದು ಒಂದೇ ಒಂದು ಶರೀರವೂ ಅರಿತಿಲ್ಲ. ಅವರು ಮಾಡಿಕೊಂಡಿರುವ ಕರ್ಮಗಳಿಗಿರುವ ಪ್ರತಿಫಲವಾಗಿದೆ ಅದು.”** (ಕುರ್‌ಆನ್ 32/17)

ನರಕವು ಯಾತನೆಯ ಬೀಡಾಗಿದೆ. ಅಕ್ರಮಿಗಳಾದ ಅವಿಶ್ವಾಸಿಗಳಿಗಾಗಿ ಅಲ್ಲಾಹು ಅದನ್ನು ಸಿದ್ಧಗೊಳಿಸಿದ್ದಾನೆ. ಮನುಷ್ಯ ಮನಸ್ಸಿನಲ್ಲಿ ಊಹಿಸಲೂ ಸಾಧ್ಯವಾಗದಂತಹ ಭಯಾನಕ ಶಿಕ್ಷೆಗಳು ಅದರಲ್ಲಿವೆ.

﴿ إِنَّآ أَعْتَدْنَا لِلظَّـٰلِمِينَ نَارًا أَحَاطَ بِهِمْ سُرَادِقُهَا ۚ وَإِن يَسْتَغِيثُوا۟ يُغَاثُوا۟ بِمَآءٍ كَٱلْمُهْلِ يَشْوِى ٱلْوُجُوهَ ۚ بِئْسَ ٱلشَّرَابُ وَسَآءَتْ مُرْتَفَقًا ﴿٢٩﴾ ﴾

**“ಖಂಡಿತವಾಗಿಯೂ ಅಕ್ರಮಿಗಳಿಗೆ ನಾವು ನರಕವನ್ನು ಸಜ್ಜುಗೊಳಿಸಿದ್ದೇವೆ. ಅದರ ಗೋಡೆಗಳು ಅವರನ್ನು ಆವರಿಸಿಕೊಂಡಿವೆ. ಹಾಗೆ ಅವರು ಸಹಾಯಕ್ಕಾಗಿ (ನೀರಿಗಾಗಿ) ಮೊರೆಯಿಟ್ಟರೆ ಅವರಿಗೆ ಎಣ್ಣೆಯಂತೆ ಕುದಿಯುತ್ತಿರುವ ನೀರನ್ನು ನೀಡಲಾಗುವುದು. ಅದು ಅವರ ಮುಖಗಳನ್ನು ಸುಟ್ಟು ಕರಕಲಾಗಿಸಲಿದೆ. ಆ ಪಾನೀಯವು ಭಯಾನಕವಾಗಿದೆ ಮತ್ತು ಅವರ ವಾಸಸ್ಥಳವು ಅತಿನಿಕೃಷ್ಟವಾಗಿದೆ.”** (ಕುರ್‌ಆನ್ 18/29)

ಅವೆರಡು (ಸ್ವರ್ಗ ಮತ್ತು ನರಕ) ಈಗಲೂ ಅಸ್ತಿತ್ವದಲ್ಲಿವೆ ಮತ್ತು ಅವೆರಡು ಎಂದೆಂದಿಗೂ ನಾಶವಾಗುವುದೇ ಇಲ್ಲ.

﴿ وَمَن يُؤْمِنۢ بِٱللَّهِ وَيَعْمَلْ صَـٰلِحًا يُدْخِلْهُ جَنَّـٰتٍ تَجْرِى مِن تَحْتِهَا ٱلْأَنْهَـٰرُ خَـٰلِدِينَ فِيهَآ أَبَدًا ۖ قَدْ أَحْسَنَ ٱللَّهُ لَهُۥ رِزْقًا ﴿١١﴾ ﴾

**“ಯಾರು ಅಲ್ಲಾಹನಲ್ಲಿ ವಿಶ್ವಾಸವಿಟ್ಟು ಸತ್ಕರ್ಮವೆಸಗುತ್ತಾನೋ ಅಲ್ಲಾಹು ಅವನನ್ನು ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಗೊಳಿಸುವನು. ಅದರಲ್ಲಿ ಅವರು ಎಂದೆಂದಿಗೂ ಶಾಶ್ವತವಾಗಿ ವಾಸಿಸುವರು. ಅಲ್ಲಾಹು ಅವನಿಗೆ ಅತ್ಯುತ್ತಮವಾದ ಜೀವನಾಧಾರವನ್ನು ಒದಗಿಸಿದ್ದಾನೆ.”** (ಕುರ್‌ಆನ್ 65/11)

﴿ إِنَّ ٱللَّهَ لَعَنَ ٱلْكَـٰفِرِينَ وَأَعَدَّ لَهُمْ سَعِيرًا ﴿٦٤﴾ خَـٰلِدِينَ فِيهَآ أَبَدًا ۖ لَّا يَجِدُونَ وَلِيًّا وَلَا نَصِيرًا ﴿٦٥﴾ يَوْمَ تُقَلَّبُ وُجُوهُهُمْ فِى ٱلنَّارِ يَقُولُونَ يَـٰلَيْتَنَآ أَطَعْنَا ٱللَّهَ وَأَطَعْنَا ٱلرَّسُولَا۠

---

(ಪುಟ 108) ಹೇಳಿದ್ದಾರೆ: ‘ಅಲ್ಲಾಹನ ನಾಮ ಮತ್ತು ವಿಶೇಷಣಗಳು ಹಾಗೂ ಅಂತ್ಯದಿನದ ಸವಿಶೇಷತೆಗಳ ಕುರಿತು ಅಲ್ಲಾಹು ಹೇಳಿರುವ ವಿಷಯಗಳ ನೈಜ ವಿವರಣೆಯು ಅವನ ಹೊರತು ಯಾರಿಗೂ ತಿಳಿದಿಲ್ಲ ಎಂದು ಕುರ್‌ಆನಿನಲ್ಲಿ ಹೇಳಲಾಗಿರುವುದಕ್ಕೆ ಇದು ಒತ್ತು ಕೊಡುತ್ತದೆ. ಇವುಗಳ ಅರ್ಥವೇನೆಂದು ನಮಗೆ ಗೊತ್ತಿರುವ ಕಾರಣದಿಂದಲೇ ಇವುಗಳನ್ನು ಹೇಳಲಾಗಿದೆ. ಅನ್ಯಥಾ ಇವುಗಳ ಕುರಿತು ಹೇಳಬೇಕಾದ ಅಗತ್ಯವೇ ಇಲ್ಲ. ಅಲ್ಲಾಹು ಅಅ್‌ಲಮ್.’

**"ಖಂಡಿತವಾಗಿಯೂ ಅಲ್ಲಾಹು ಅವಿಶ್ವಾಸಿಗಳನ್ನು ಶಪಿಸಿದ್ದಾನೆ ಮತ್ತು ಅವರಿಗೆ ಹೊತ್ತಿ ಜ್ವಲಿಸುವ ನರಕಾಗ್ನಿಯನ್ನು ಸಿದ್ಧಗೊಳಿಸಿದ್ದಾನೆ. ಅದರಲ್ಲಿ ಅವರು ಎಂದೆಂದಿಗೂ ಶಾಶ್ವತವಾಗಿ ವಾಸಿಸುವರು. ಯಾವ ರಕ್ಷಕನನ್ನೂ ಸಹಾಯಕನನ್ನೂ ಅವರು ಕಾಣಲಾರರು. ಅವರ ಮುಖಗಳನ್ನು ನರಕಾಗ್ನಿಯಲ್ಲಿ ತಿರುವಿಹಾಕುವ ದಿನ ಅವರು ಹೇಳುವರು: ನಾವು ಅಲ್ಲಾಹನನ್ನು ಮತ್ತು ಸಂದೇಶವಾಹಕನನ್ನು ಅನುಸರಿಸಿದ್ದರೆ ಅದೆಷ್ಟು ಚೆನ್ನಾಗಿರುತ್ತಿತ್ತು!"** (ಕುರ್‌ಆನ್ 33/64–66)[52]

ಯಾರಿಗೆಲ್ಲ ಸ್ವರ್ಗವಿದೆಯೆಂದು ಕುರ್‌ಆನ್ ಮತ್ತು ಸುನ್ನತ್ ಹೆಸರೆತ್ತಿ ಹೇಳುವ ಮೂಲಕ ಅಥವಾ ವಿಶೇಷಣದ ಮೂಲಕ ಸಾಕ್ಷ್ಯವಹಿಸಿದೆಯೋ ಅವರಿಗೆಲ್ಲ ಸ್ವರ್ಗವಿದೆಯೆಂದು ನಾವೂ ಸಾಕ್ಷ್ಯವಹಿಸುತ್ತೇವೆ.

ಹೆಸರೆತ್ತಿ ಹೇಳುವ ಮೂಲಕ ಸಾಕ್ಷ್ಯವಹಿಸಲಾದವರು: ಅಬೂಬಕ್ರ್, ಉಮರ್, ಉಸ್ಮಾನ್, ಅಲೀ (ಅವರೆಲ್ಲರ ಕುರಿತು ಅಲ್ಲಾಹು ತೃಪ್ತಿಪಡಲಿ) ಮತ್ತು ಪ್ರವಾದಿ(ﷺ)ರವರು ಹೆಸರೆತ್ತಿ ಹೇಳಿರುವ ಇತರ ಸಹಾಬಿಗಳಿಗಿರುವ ಸಾಕ್ಷ್ಯ.[53]

ವಿಶೇಷಣದ ಮೂಲಕ ಸಾಕ್ಷ್ಯವಹಿಸಲಾದವರು: ಎಲ್ಲ ವಿಶ್ವಾಸಿಗಳಿಗೆ ಅಥವಾ ಮುತ್ತಕೀಗಳಿಗಿರುವ ಸಾಕ್ಷ್ಯ.

ಯಾರಿಗೆಲ್ಲ ನರಕವಿದೆಯೆಂದು ಕುರ್‌ಆನ್ ಮತ್ತು ಸುನ್ನತ್ ಹೆಸರೆತ್ತಿ ಹೇಳುವ ಮೂಲಕ ಅಥವಾ ವಿಶೇಷಣದ ಮೂಲಕ ಸಾಕ್ಷ್ಯವಹಿಸಿದೆಯೋ ಅವರಿಗೆಲ್ಲ ನರಕವಿದೆಯೆಂದು ನಾವೂ ಸಾಕ್ಷ್ಯವಹಿಸುತ್ತೇವೆ.

ಹೆಸರೆತ್ತಿ ಹೇಳುವ ಮೂಲಕ ಸಾಕ್ಷ್ಯವಹಿಸಲಾದವರು: ಅಬೂ ಲಹಬ್, ಅಮ್ರ್ ಇಬ್ನ್ ಲುಹಯ್ಯ್ ಅಲ್‌ಖುಝಾಈ ಮುಂತಾದವರಿಗಿರುವ ಸಾಕ್ಷ್ಯ.[54]

ವಿಶೇಷಣದ ಮೂಲಕ ಸಾಕ್ಷ್ಯವಹಿಸಲಾದವರು: ಎಲ್ಲ ಅವಿಶ್ವಾಸಿಗಳಿಗೆ ಅಥವಾ ಹಿರಿಯ ಶಿರ್ಕ್ (ಅಶ್ಶಿರ್ಕುಲ್ ಅಕ್ಬರ್) ಮಾಡಿದ ಮುಶ್ರಿಕ್‌ಗಳಿಗೆ ಅಥವಾ ಕಪಟವಿಶ್ವಾಸಿಗಳಿಗಿರುವ ಸಾಕ್ಷ್ಯ.

ಗೋರಿಯಲ್ಲಿರುವ ಪರೀಕ್ಷಣೆಗಳಲ್ಲಿ ನಾವು ವಿಶ್ವಾಸವಿಡುತ್ತೇವೆ. ಅದು

---

**52**. ಈ ಆಯತ್ತನ್ನು ವಿವರಿಸುತ್ತಾ ಶೈಖ್ ಉಸೈಮೀನ್‌ರವರು ತನ್ನ 'ಶರ್ಹ್ ಅಕೀದತಿಲ್ ವಾಸಿತಿಯ್ಯಃ'ದಲ್ಲಿ (2/182) ಹೇಳಿದ್ದಾರೆ: 'ಅವರು ನರಕಾಗ್ನಿಯಲ್ಲಿ ಶಾಶ್ವತವಾಗಿ ವಾಸಿಸುವರು ಎಂದು ಕುರ್‌ಆನಿನಲ್ಲಿ ಮೂರು ಕಡೆ ಹೇಳಲಾಗಿದೆ: ಅವುಗಳ ಪೈಕಿ ಒಂದು ಈ ಆಯತ್. ಇನ್ನೊಂದು ಸೂರಃ ಅನ್ನಿಸಾಅ್‌ನ 169ನೇ ಆಯತ್. ಮತ್ತೊಂದು ಸೂರಃ ಅಲ್‌ಜಿನ್ನ್‌ನ 23ನೇ ಆಯತ್. ನರಕಾಗ್ನಿಯು ಶಾಶ್ವತವಾಗಿ ಅಸ್ತಿತ್ವದಲ್ಲಿರುವುದು ಎಂದು ಇವುಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.'

**53**. ನೋಡಿ: 'ಸುನನ್ ಅಬೀದಾವೂದ್' (2/623; ಹದೀಸ್ ನಂ. 4649) 'ಸುನನು ತ್ತಿರ್ಮಿದಿ' (5/648; ಹದೀಸ್ ನಂ. 3748) ಮತ್ತಿತರರು. ಶೈಖ್ ಅಲ್ಬಾನೀ ತನ್ನ 'ಸಹೀಹುಲ್ ಜಾಮಿಅ್'ನಲ್ಲಿ (ಹದೀಸ್ ನಂ. 4010) ಇದನ್ನು ಸಹೀಹ್ ಎಂದಿದ್ದಾರೆ.

**54**. ನೋಡಿ: 'ಸಹೀಹುಲ್ ಬುಖಾರಿ' (1/406; ಹದೀಸ್ ನಂ. 1154).

ಗೋರಿಯೊಳಗಿರುವ ಮೃತ ವ್ಯಕ್ತಿಯೊಂದಿಗೆ ಅವನ ಪ್ರಭು, ಅವನ ಧರ್ಮ ಮತ್ತು ಅವನ ಪ್ರವಾದಿಯ ಕುರಿತು ಪ್ರಶ್ನಿಸುವುದಾಗಿದೆ. ಆಗ

﴿ يُثَبِّتُ ٱللَّهُ ٱلَّذِينَ ءَامَنُوا۟ بِٱلْقَوْلِ ٱلثَّابِتِ فِى ٱلْحَيَوٰةِ ٱلدُّنْيَا وَفِى ٱلْءَاخِرَةِ ﴾

**“ಐಹಿಕ ಜೀವನದಲ್ಲೂ ಪರಲೋಕ ಜೀವನದಲ್ಲೂ ಅಲ್ಲಾಹು ವಿಶ್ವಾಸಿಗಳನ್ನು ದೃಢವಾದ ವಚನದ ಮೂಲಕ ಸುದೃಢಗೊಳಿಸುವನು.”** (ಕುರ್‌ಆನ್ 14/27)

ಆಗ ವಿಶ್ವಾಸಿಯು ಹೇಳುವನು: ‘ನನ್ನ ಪ್ರಭು ಅಲ್ಲಾಹು, ನನ್ನ ಧರ್ಮ ಇಸ್ಲಾಮ್ ಮತ್ತು ನನ್ನ ಪ್ರವಾದಿ ಮುಹಮ್ಮದ್(ﷺ).’[55]

ಅವಿಶ್ವಾಸಿ ಮತ್ತು ಕಪಟವಿಶ್ವಾಸಿ ಹೇಳುವರು: ‘ನನಗೇನೂ ಗೊತ್ತಿಲ್ಲ! ಜನರು ಏನೋ ಹೇಳುತ್ತಿರುವುದಾಗಿ ನಾನು ಆಲಿಸಿದ್ದೇನೆ. ನಾನೂ ಹಾಗೆಯೇ ಹೇಳಿದ್ದೇನೆ.’[56]

ವಿಶ್ವಾಸಿಗಳಿಗಿರುವ ಗೋರಿಯ ಅನುಗ್ರಹಗಳಲ್ಲಿ ನಾವು ವಿಶ್ವಾಸವಿಡುತ್ತೇವೆ.

﴿ ٱلَّذِينَ تَتَوَفَّىٰهُمُ ٱلْمَلَٰٓئِكَةُ طَيِّبِينَ ۙ يَقُولُونَ سَلَٰمٌ عَلَيْكُمُ ٱدْخُلُوا۟ ٱلْجَنَّةَ بِمَا كُنتُمْ تَعْمَلُونَ ﴿٣٢﴾ ﴾

**“ಯಾರ ಆತ್ಮಗಳನ್ನು ಮಲಕ್‌ಗಳು ಶುದ್ಧಾವಸ್ಥೆಯಲ್ಲಿ ತೆಗೆಯುತ್ತಾರೋ ಆಗ ಅವರು (ಮಲಕ್‌ಗಳು) ಹೇಳುವರು: ನಿಮ್ಮ ಮೇಲೆ ಶಾಂತಿಯಿರಲಿ. ನೀವು ಮಾಡುತ್ತಿದ್ದ ಸತ್ಕರ್ಮಗಳ ಕಾರಣದಿಂದಾಗಿ ನೀವು ಸ್ವರ್ಗವನ್ನು ಪ್ರವೇಶಿಸಿರಿ.”** (ಕುರ್‌ಆನ್ 16/32)

ಅಕ್ರಮಿಗಳಿಗೆ ಮತ್ತು ಅವಿಶ್ವಾಸಿಗಳಿಗಿರುವ ಗೋರಿಯ ಶಿಕ್ಷೆಯಲ್ಲಿ ನಾವು ವಿಶ್ವಾಸವಿಡುತ್ತೇವೆ.

﴿ إِذِ ٱلظَّٰلِمُونَ فِى غَمَرَٰتِ ٱلْمَوْتِ وَٱلْمَلَٰٓئِكَةُ بَاسِطُوٓا۟ أَيْدِيهِمْ أَخْرِجُوٓا۟ أَنفُسَكُمُ ۖ ٱلْيَوْمَ تُجْزَوْنَ عَذَابَ ٱلْهُونِ بِمَا كُنتُمْ تَقُولُونَ عَلَى ٱللَّهِ غَيْرَ ٱلْحَقِّ وَكُنتُمْ عَنْ ءَايَٰتِهِۦ تَسْتَكْبِرُونَ ﴿٩٣﴾ ﴾

**“ಅಕ್ರಮಿಗಳು ಮರಣ ವಿಭ್ರಾಂತಿಯಲ್ಲಿರುವಾಗ ಮತ್ತು ಮಲಕ್‌ಗಳು ತಮ್ಮ ಕೈಗಳನ್ನು ಚಾಚಿ (ಹೇಳುವರು): ನಿಮ್ಮ ಆತ್ಮಗಳನ್ನು ಹೊರಗೆಡಹಿರಿ; ನೀವು ಅಲ್ಲಾಹನ ಕುರಿತು ಮಿಥ್ಯಮಾತುಗಳನ್ನು ಹೇಳುತ್ತಿದ್ದ ಮತ್ತು ಅವನ ದೃಷ್ಟಾಂತಗಳ ಕುರಿತು ನೀವು ಅಹಂಕಾರ**

---

**55**. ನೋಡಿ: ‘ಸಹೀಹುಲ್ ಬುಖಾರಿ’ (1/448; ಹದೀಸ್ ನಂ. 1273) ಮತ್ತು ‘ಸಹೀಹ್ ಮುಸ್ಲಿಮ್’ (4/2200; ಹದೀಸ್ ನಂ. 2870, 2871).

**56**. ನೋಡಿ: ‘ಸುನನು ತ್ತಿರ್ಮಿದಿ’ (3/383; ಹದೀಸ್ ನಂ. 737). ಅಲ್ಬಾನೀ ತನ್ನ ‘ಸಿಲ್ಸಿಲತು ಸ್ಸಹೀಹಃ’ದಲ್ಲಿ (3/380; ಹದೀಸ್ ನಂ. 1391) ಇದನ್ನು ಹಸನ್ ಎಂದಿದ್ದಾರೆ.

**ತೋರಿದ್ದ ಕಾರಣದಿಂದಾಗಿ ಇಂದು ನಿಮಗೆ ಅಪಮಾನಕರವಾದ ಶಿಕ್ಷೆಯನ್ನು ಪ್ರತಿಫಲವಾಗಿ ನೀಡಲಾಗುವುದು."** (ಕುರ್‌ಆನ್ 6/93)

ಈ ವಿಷಯದಲ್ಲಿರುವ (ಗೋರಿ ಶಿಕ್ಷೆಯ ವಿಷಯದಲ್ಲಿರುವ) ಹದೀಸ್‌ಗಳು ಅಸಂಖ್ಯವೂ ಸುಪರಿಚಿತವೂ ಆಗಿವೆ. ಆದ್ದರಿಂದ ಅಗೋಚರ ವಿಷಯಗಳ ಕುರಿತು ಕುರ್‌ಆನ್ ಮತ್ತು ಸುನ್ನತ್‌ನಲ್ಲಿ ಏನೆಲ್ಲ ಬಂದಿವೆಯೋ ಅವುಗಳಲ್ಲಿ ವಿಶ್ವಾಸವಿಡುವುದು ಮತ್ತು ಭೌತಿಕ ಜೀವನದ ಅನುಭವಗಳ ಕಾರಣದಿಂದಾಗಿ ಅವುಗಳನ್ನು ವಿರೋಧಿಸದಿರುವುದು ವಿಶ್ವಾಸಿಯ ಮೇಲೆ ಕಡ್ಡಾಯವಾಗಿದೆ. ಪರಲೋಕ ಜೀವನದ ವಿಷಯಗಳನ್ನು ಐಹಿಕ ಜೀವನದ ವಿಷಯಗಳೊಂದಿಗೆ ಹೋಲಿಸಲಾಗದು. ಯಾಕೆಂದರೆ ಅವೆರಡರ ಮಧ್ಯೆ ಸ್ಪಷ್ಟವಾದ ಮತ್ತು ಅಗಾಧವಾದ ವ್ಯತ್ಯಾಸವು ಗೋಚರವಾಗುತ್ತದೆ. ಸಹಾಯ ಮಾಡುವವನು ಅಲ್ಲಾಹು ಮಾತ್ರ.

# الإيمان بالقدر خيره وشره

## ವಿಧಿಯಲ್ಲಿರುವ –ಅದರ ಒಳಿತು ಕೆಡುಕುಗಳಲ್ಲಿರುವ– ವಿಶ್ವಾಸ

ನಾವು ಕದರ್‌ನಲ್ಲಿ (ವಿಧಿಯಲ್ಲಿ) –ಅದರ ಒಳಿತು ಮತ್ತು ಕೆಡುಕುಗಳಲ್ಲಿ– ವಿಶ್ವಾಸವಿಡುತ್ತೇವೆ. ಅದು ಅಲ್ಲಾಹು ತನ್ನ ಪೂರ್ವನಿರ್ಧರಿತ ಜ್ಞಾನಕ್ಕೆ ಅನುಸಾರವಾಗಿ ಮತ್ತು ತನ್ನ ಯುಕ್ತಿ ಏನನ್ನು ಅನಿವಾರ್ಯಗೊಳಿಸುತ್ತದೋ ಅದಕ್ಕನುಸಾರವಾಗಿ ತನ್ನ ಸೃಷ್ಟಿಯ ಮೇಲೆ ಪೂರ್ವನಿಗದಿತಗೊಳಿಸಿದ ನಿರ್ಣಯವಾಗಿದೆ.

ಕದರ್‌ಗೆ ನಾಲ್ಕು ಹಂತಗಳಿವೆ.

**ಮೊದಲನೆ ಹಂತ: ಅಲ್‌ಇಲ್ಮ್ (ಜ್ಞಾನ):** ಅಲ್ಲಾಹು ಎಲ್ಲ ವಿಷಯಗಳ ಕುರಿತು, ಏನೆಲ್ಲ ಸಂಭವಿಸಿದೆ, ಏನೆಲ್ಲ ಸಂಭವಿಸಲಿದೆ ಮತ್ತು ಹೇಗೆ ಸಂಭವಿಸಲಿದೆ ಎಂಬುದನ್ನು ತನ್ನ ಶಾಶ್ವತ ಜ್ಞಾನದಿಂದ ಅರಿಯುತ್ತಾನೆ ಎಂದು ನಾವು ವಿಶ್ವಾಸವಿಡುತ್ತೇವೆ. ಯಾವುದಾದರೊಂದು ವಿಷಯದ ಕುರಿತು ಅಜ್ಞಾನಿಯಾಗಿದ್ದು ನಂತರ ಅದರ ಕುರಿತು ಜ್ಞಾನವನ್ನು ನವೀಕರಿಸಬೇಕಾದ ಅಗತ್ಯವು ಅವನಿಗಿಲ್ಲ. ಹಾಗೆಯೇ ಅವನು ಅರಿತಿರುವುದನ್ನು ಅವನು ಮರೆಯುವುದೂ ಇಲ್ಲ.

**ಎರಡನೆ ಹಂತ: ಅಲ್‌ಕಿತಾಬಃ (ದಾಖಲೆ):** ಅಂತ್ಯದಿನದವರೆಗೆ ಏನೆಲ್ಲ ಸಂಭವಿಸಲಿವೆಯೋ ಅವೆಲ್ಲವನ್ನೂ ಅಲ್ಲಾಹು 'ಲೌಹುಲ್ ಮಹ್ಫೂದ್' (ಸುರಕ್ಷಿತ ಹಲಗೆ)ಯಲ್ಲಿ ದಾಖಲಿಸಿದ್ದಾನೆ ಎಂದು ನಾವು ವಿಶ್ವಾಸವಿಡುತ್ತೇವೆ.

﴿أَلَمْ تَعْلَمْ أَنَّ ٱللَّهَ يَعْلَمُ مَا فِى ٱلسَّمَآءِ وَٱلْأَرْضِ ۗ إِنَّ ذَٰلِكَ فِى كِتَٰبٍ ۚ إِنَّ ذَٰلِكَ عَلَى ٱللَّهِ يَسِيرٌ ٧٠﴾

**"ಆಕಾಶದಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವನ್ನೂ ಖಂಡಿತವಾಗಿಯೂ ಅಲ್ಲಾಹು ಅರಿತಿದ್ದಾನೆ ಎಂದು ನಿನಗೆ ತಿಳಿದಿಲ್ಲವೇ? ಖಂಡಿತವಾಗಿಯೂ ಅವೆಲ್ಲವೂ ಒಂದು ದಾಖಲೆಯಲ್ಲಿದೆ. ಖಂಡಿತವಾಗಿಯೂ ಅದು ಅಲ್ಲಾಹನ ಪಾಲಿಗೆ ಅತ್ಯಂತ ಸುಲಭವಾಗಿದೆ."** (ಕುರ್‌ಆನ್ 22/70)

**ಮೂರನೆ ಹಂತ: ಅಲ್‌ಮಶೀಅಃ (ಇಚ್ಛೆ):** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹನ ಇಚ್ಛೆಯಿಂದಲೇ ಉಂಟಾಗಿದೆ ಮತ್ತು ಅವನ ಇಚ್ಛೆಯ ಹೊರತು ಏನೊಂದೂ ಉಂಟಾಗುವುದಿಲ್ಲ ಎಂದು ನಾವು ವಿಶ್ವಾಸವಿಡುತ್ತೇವೆ. ಅವನು ಏನನ್ನು ಇಚ್ಛಿಸುತ್ತಾನೋ ಅದು ಉಂಟಾಗುತ್ತದೆ ಮತ್ತು ಅವನು ಏನನ್ನು ಇಚ್ಛಿಸುವುದಿಲ್ಲವೋ ಅದು ಉಂಟಾಗುವುದಿಲ್ಲ.

**ನಾಲ್ಕನೆ ಹಂತ: ಅಲ್‌ಖಲ್ಕ್ (ಸೃಷ್ಟಿ):**

﴿ ٱللَّهُ خَٰلِقُ كُلِّ شَيْءٍۖ وَهُوَ عَلَىٰ كُلِّ شَيْءٍ وَكِيلٌ ۝٦٢ لَّهُۥ مَقَالِيدُ ٱلسَّمَٰوَٰتِ وَٱلْأَرْضِۗ ﴾

**"ಅಲ್ಲಾಹು ಎಲ್ಲ ವಸ್ತುಗಳ ಸೃಷ್ಟಿಕರ್ತನಾಗಿದ್ದಾನೆ ಮತ್ತು ಅವನು ಎಲ್ಲ ವಸ್ತುಗಳ ಸಂರಕ್ಷಕನಾಗಿದ್ದಾನೆ. ಆಕಾಶಗಳ ಮತ್ತು ಭೂಮಿಯ ಕೀಲಿಕೈಗಳು ಅವನಿಗೆ ಸೇರಿದ್ದಾಗಿವೆ."** (ಕುರ್‌ಆನ್ 39/62–63) ಎಂದು ನಾವು ವಿಶ್ವಾಸವಿಡುತ್ತೇವೆ.

ಸ್ವತಃ ಅಲ್ಲಾಹನಿಂದ ಏನೆಲ್ಲ ಉಂಟಾಗುವುದೋ ಮತ್ತು ಅವನ ಸೃಷ್ಟಿಗಳಿಂದ ಏನೆಲ್ಲ ಉಂಟಾಗುವುದೋ ಅವೆಲ್ಲವನ್ನೂ ಈ ನಾಲ್ಕು ಹಂತಗಳು ಆವರಿಸಿಕೊಂಡಿರುತ್ತವೆ. ಆದ್ದರಿಂದ ಸೃಷ್ಟಿಗಳು ಆಡುವ ಮಾತುಗಳು ಅಥವಾ ಮಾಡುವ ಕರ್ಮಗಳು ಅಥವಾ ವರ್ಜಿಸುವ ಕರ್ಮಗಳು ಎಲ್ಲವನ್ನೂ ಅಲ್ಲಾಹು ಅರಿತಿದ್ದಾನೆ, ಎಲ್ಲವೂ ಅವನ ಬಳಿ ದಾಖಲೆಯಲ್ಲಿವೆ. ಖಂಡಿತವಾಗಿಯೂ ಅಲ್ಲಾಹು ಅವುಗಳನ್ನು ಇಚ್ಛಿಸಿದ್ದಾನೆ ಮತ್ತು ಅವುಗಳನ್ನು ಸೃಷ್ಟಿಸಿದ್ದಾನೆ.

﴿ لِمَن شَآءَ مِنكُمْ أَن يَسْتَقِيمَ ۝٢٨ وَمَا تَشَآءُونَ إِلَّآ أَن يَشَآءَ ٱللَّهُ رَبُّ ٱلْعَٰلَمِينَ ۝٢٩ ﴾

**"ನಿಮ್ಮ ಪೈಕಿ ನೇರದಾರಿಯಲ್ಲಾಗಲು ಇಚ್ಛಿಸುವವರಿಗೆ; ಜಗತ್ತಿನ ಪ್ರಭು ಇಚ್ಛಿಸಿದ ಹೊರತು ನೀವು ಇಚ್ಛಿಸಲಾರಿರಿ."** (ಕುರ್‌ಆನ್ 81/28–29)

﴿ وَلَوْ شَآءَ ٱللَّهُ مَا ٱقْتَتَلُوا۟ وَلَٰكِنَّ ٱللَّهَ يَفْعَلُ مَا يُرِيدُ ۝٢٥٣ ﴾

**"ಅಲ್ಲಾಹು ಇಚ್ಛಿಸುತ್ತಿದ್ದರೆ ಅವರು ಪರಸ್ಪರ ಹೋರಾಡುತ್ತಿರಲಿಲ್ಲ. ಆದರೆ ಅಲ್ಲಾಹು ತಾನಿಚ್ಛಿಸುವುದನ್ನು ಮಾಡುತ್ತಾನೆ."** (ಕುರ್‌ಆನ್ 2/253)

﴿ وَلَوْ شَآءَ ٱللَّهُ مَا فَعَلُوهُۖ فَذَرْهُمْ وَمَا يَفْتَرُونَ ۝١٣٧ ﴾

**"ಅಲ್ಲಾಹು ಇಚ್ಛಿಸುತ್ತಿದ್ದರೆ ಅವರು ಅದನ್ನು ಮಾಡುತ್ತಿರಲಿಲ್ಲ. ಆದ್ದರಿಂದ ಅವರನ್ನು ಮತ್ತು ಅವರು ಹೆಣೆಯುತ್ತಿರುವ ಮಿಥ್ಯಾರೋಪಗಳನ್ನು ನಿರ್ಲಕ್ಷಿಸು."** (ಕುರ್‌ಆನ್ 6/137)

﴿ وَٱللَّهُ خَلَقَكُمْ وَمَا تَعْمَلُونَ ۝٩٦ ﴾

**"ಅಲ್ಲಾಹು ನಿಮ್ಮನ್ನು ಮತ್ತು ನೀವು ಮಾಡುತ್ತಿರುವುದನ್ನು ಸೃಷ್ಟಿಸಿದವನಾಗಿದ್ದಾನೆ."** (ಕುರ್‌ಆನ್ 37/96)

ಆದರೂ ಅಲ್ಲಾಹು ಮನುಷ್ಯನಿಗೆ ಸ್ವಾತಂತ್ರ್ಯ ಮತ್ತು ಸಾಮರ್ಥ್ಯವನ್ನು ಕೊಟ್ಟಿದ್ದಾನೆ ಹಾಗೂ ಇವೆರಡನ್ನು (ಸ್ವಾತಂತ್ರ್ಯ ಮತ್ತು ಸಾಮರ್ಥ್ಯವನ್ನು) ಬಳಸಿ ಕರ್ಮವು ಉಂಟಾಗುತ್ತದೆ ಎಂದು ನಾವು ವಿಶ್ವಾಸವಿಡುತ್ತೇವೆ.

ಮನುಷ್ಯನು ತನ್ನ ಸ್ವಾತಂತ್ರ್ಯ ಮತ್ತು ಸಾಮರ್ಥ್ಯವನ್ನು ಬಳಸಿ ಕರ್ಮವೆಸಗುತ್ತಾನೆ ಎಂಬುದಕ್ಕೆ ಪುರಾವೆಯಾಗಿ ಅನೇಕ ವಿಷಯಗಳಿವೆ:

**ಮೊದಲನೆಯದಾಗಿ:**

﴿ فَأْتُوا۟ حَرْثَكُمْ أَنَّىٰ شِئْتُمْ ﴾

**“ನೀವು ನಿಮ್ಮ ಕೃಷಿಯನ್ನು ನೀವಿಚ್ಛಿಸುವ ಪ್ರಕಾರ ಸಮೀಪಿಸಿರಿ.”** (ಕುರ್‌ಆನ್ 2/223)

﴿ ۞ وَلَوْ أَرَادُوا۟ ٱلْخُرُوجَ لَأَعَدُّوا۟ لَهُۥ عُدَّةً ﴾

**“ಅವರೇನಾದರೂ ಹೊರಡುವುದನ್ನು ಇಚ್ಛಿಸಿದ್ದರೆ ಅದಕ್ಕಾಗಿ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದರು.”** (ಕುರ್‌ಆನ್ 9/46)

ಈ ಮೇಲಿನ ವಚನಗಳಲ್ಲಿರುವಂತೆ ಮನುಷ್ಯನು ತನ್ನ ಸ್ವಇಚ್ಛೆಯಿಂದಲೇ ಸಮೀಪಿಸುವುದನ್ನು ಮತ್ತು ಸ್ವಇಚ್ಛೆಯಿಂದಲೇ ಸಿದ್ಧತೆ ಮಾಡಿಕೊಳ್ಳುವುದನ್ನು ಅಲ್ಲಾಹು ದೃಢೀಕರಿಸಿದ್ದಾನೆ.

**ಎರಡನೆಯದಾಗಿ:** ಮನುಷ್ಯನಿಗೆ ನಿರ್ದೇಶಿಸಲಾದ ಆಜ್ಞೆಗಳು ಮತ್ತು ನಿಷೇಧಗಳು. ಮನುಷ್ಯನಿಗೆ ಸ್ವಾತಂತ್ರ್ಯವಾಗಲಿ ಸಾಮರ್ಥ್ಯವಾಗಲಿ ಇಲ್ಲದಿರುತ್ತಿದ್ದರೆ ಅವನಿಗಿರುವ ಈ ನಿರ್ದೇಶನಗಳು ಅವನಿಗೆ ಸಾಮರ್ಥ್ಯವಿಲ್ಲದ್ದನ್ನು ಅವನ ಮೇಲೆ ಹೇರಿಕೊಂಡಂತಾಗುತ್ತದೆ. ಇದು ಅಲ್ಲಾಹನ ಯುಕ್ತಿಯನ್ನು ಮತ್ತು ಕರುಣೆಯನ್ನು, ಹಾಗೂ ಈ ಕೆಳಗಿನ ವಚನದಲ್ಲಿರುವ ಅವನ ಸತ್ಯಸಂಧತೆಯನ್ನು ನಿರಾಕರಿಸುವುದಾಗಿದೆ.

﴿ لَا يُكَلِّفُ ٱللَّهُ نَفْسًا إِلَّا وُسْعَهَا ﴾

**“ಅಲ್ಲಾಹು ಯಾವುದೇ ಶರೀರದ ಮೇಲೂ ಅದಕ್ಕೆ ಸಾಮರ್ಥ್ಯವಿರುವುದನ್ನು ಹೊರತು ಹೇರುವುದಿಲ್ಲ.”** (ಕುರ್‌ಆನ್ 2/286)

**ಮೂರನೆಯದಾಗಿ:** ಸತ್ಕರ್ಮ ಮಾಡಿರುವುದಕ್ಕಾಗಿ ಸತ್ಕರ್ಮಿಗಿರುವ ಪ್ರಶಂಸೆ ಮತ್ತು ದುಷ್ಕರ್ಮ ಮಾಡಿರುವುದಕ್ಕಾಗಿ ದುಷ್ಕರ್ಮಿಗಿರುವ ನಿಂದನೆ. ಮತ್ತು ಇಬ್ಬರಿಗೂ ಅವರವರಿಗೆ ಅರ್ಹವಾಗಿರುವ ಪ್ರತಿಫಲ ನೀಡುವಿಕೆ.

ಒಂದು ವೇಳೆ ಮನುಷ್ಯನ ಕರ್ಮವು ಅವನ ಇಚ್ಛೆ ಮತ್ತು ಸ್ವಾತಂತ್ರ್ಯದಿಂದ ಸಂಭವಿಸುವುದಿಲ್ಲವೆಂದಾದರೆ ಸತ್ಕರ್ಮಿಗಿರುವ ಪ್ರಶಂಸೆಯು ಅನರ್ಥವಾಗಿದೆ ಮತ್ತು ದುಷ್ಕರ್ಮಿಗಿರುವ ಶಿಕ್ಷೆಯು ಅಕ್ರಮವಾಗಿದೆ. ಅಲ್ಲಾಹನಂತೂ ಅನರ್ಥ ಮತ್ತು ಅಕ್ರಮದಿಂದ ಪರಿಶುದ್ಧನಾಗಿದ್ದಾನೆ.

**ನಾಲ್ಕನೆಯದಾಗಿ:** ಅಲ್ಲಾಹು ಸಂದೇಶವಾಹಕರನ್ನು ನಿಯೋಗಿಸಿದ್ದಾನೆ.

﴿ رُّسُلًا مُّبَشِّرِينَ وَمُنذِرِينَ لِئَلَّا يَكُونَ لِلنَّاسِ عَلَى ٱللَّهِ حُجَّةٌۢ بَعْدَ ٱلرُّسُلِ ﴾

**“ಶುಭವಾರ್ತೆಯನ್ನು ತಿಳಿಸುವ ಮತ್ತು ಮುನ್ನೆಚ್ಚರಿಕೆ ನೀಡುವ ಸಂದೇಶವಾಹಕರು;**

**ಸಂದೇಶವಾಹಕರ (ನಿಯೋಗದ) ನಂತರ ಜನರಿಗೆ ಅಲ್ಲಾಹನ ವಿರುದ್ಧ ಯಾವ ಪುರಾವೆಯೂ ಉಂಟಾಗದಿರುವುದಕ್ಕಾಗಿ."** (ಕುರ್‌ಆನ್ 4/165)

ಒಂದು ವೇಳೆ ಮನುಷ್ಯನ ಕರ್ಮವು ಅವನ ಇಚ್ಛೆ ಮತ್ತು ಸ್ವಾತಂತ್ರ್ಯದಿಂದ ಸಂಭವಿಸುವುದಿಲ್ಲವೆಂದಾದರೆ ಸಂದೇಶವಾಹಕರನ್ನು ನಿಯೋಗಿಸುವ ಅಲ್ಲಾಹನ ಪುರಾವೆಯು ನಿರರ್ಥಕವಾಗುತ್ತಿತ್ತು.

**ಐದನೆಯದಾಗಿ:** ಕರ್ಮವೊಂದನ್ನು ಮಾಡುವ ವ್ಯಕ್ತಿ ತಾನು ಏನನ್ನೋ ಮಾಡುತ್ತಿದ್ದೇನೆ ಅಥವಾ ಏನನ್ನೋ ವರ್ಜಿಸುತ್ತಿದ್ದೇನೆ ಎಂಬ ಬಲವಂತದ ಯಾವ ಪ್ರಜ್ಞೆಯೂ ಇಲ್ಲದ ಇಂದ್ರಿಯಾನುಭವ ಹೊಂದಿರುತ್ತಾನೆ. ಅವನು ಕೇವಲ ತನ್ನ ಇಚ್ಛೆಯಿಂದಲೇ ನಿಲ್ಲುತ್ತಾನೆ, ಕೂರುತ್ತಾನೆ, ಪ್ರವೇಶಿಸುತ್ತಾನೆ, ಹೊರಡುತ್ತಾನೆ ಮತ್ತು ಪ್ರಯಾಣ ಮಾಡುತ್ತಾನೆ. ಇದರಲ್ಲಿ ಯಾರೋ ಒಬ್ಬರು ತನಗೆ ಬಲವಂತ ಮಾಡುತ್ತಿದ್ದಾರೆ ಎಂದು ಅವನು ಅರಿಯುವುದೇ ಇಲ್ಲ. ವಾಸ್ತವಿಕವಾಗಿ ಮನುಷ್ಯನು ತನ್ನ ಸ್ವಾತಂತ್ರ್ಯದಿಂದ ಮಾಡುವ ಕರ್ಮ ಮತ್ತು ಯಾರದೋ ಬಲವಂತದಿಂದ ಮಾಡುವ ಕರ್ಮಗಳ ಮಧ್ಯೆ ಸ್ಪಷ್ಟವಾದ ಗೋಚರವಾದ ವ್ಯತ್ಯಾಸವಿದೆ. ಅದೇ ರೀತಿ ಶರೀಅತ್ ಕೂಡ ಅವೆರಡರ ಮಧ್ಯೆ ಯುಕ್ತಿಪೂರ್ಣವಾದ ವ್ಯತ್ಯಾಸವನ್ನಿಟ್ಟಿದೆ. ಆದ್ದರಿಂದ ಅಲ್ಲಾಹನೊಂದಿಗಿರುವ ಕರ್ತವ್ಯಗಳಿಗೆ ಸಂಬಂಧಿಸಿದಂತೆ ಬಲವಂತದಿಂದ ಮಾಡಲಾಗುವ ಯಾವ ಕರ್ಮಕ್ಕೂ ಮನುಷ್ಯನನ್ನು ಶಿಕ್ಷಿಸಲಾಗುವುದಿಲ್ಲ.

ನಮ್ಮ ಅಭಿಪ್ರಾಯದ ಪ್ರಕಾರ ವಿಧಿಯನ್ನು ನೆಪವಾಗಿಟ್ಟು ಪಾಪಿಗೆ ತನ್ನ ಪಾಪವನ್ನು ಸಮರ್ಥಿಸಲು ಸಾಧ್ಯವಿಲ್ಲ. ಯಾಕೆಂದರೆ ಪಾಪಿಯು ಪಾಪದೆಡೆಗೆ ತನ್ನ ಸ್ವಾತಂತ್ರ್ಯದಿಂದಲೇ ಮುಂದಡಿಯಿಡುತ್ತಾನೆ. ಅಲ್ಲಾಹು ಅದನ್ನು ತನ್ನ ಮೇಲೆ ವಿಧಿಸಿದ್ದಾನೆ ಎಂಬ ಯಾವ ಅರಿವೂ ಅವನಿಗಿರುವುದಿಲ್ಲ. ಅಲ್ಲಾಹನ ವಿಧಿಯು ಜಾರಿಯಾಗುವವರೆಗೆ ಅಲ್ಲಾಹನ ವಿಧಿಯೇನೆಂದು ಯಾರೊಬ್ಬರೂ ಅರಿತಿರುವುದಿಲ್ಲ.

﴿ وَمَا تَدْرِى نَفْسٌ مَّاذَا تَكْسِبُ غَدًا ﴾

**"ತಾನು ನಾಳೆ ಏನು ಗಳಿಸಲಿರುವೆನೆಂದು ಯಾವ ಶರೀರವೂ ಅರಿತಿಲ್ಲ."** (ಕುರ್‌ಆನ್ 31/34)

ಒಂದು ಕರ್ಮದತ್ತ ಮುಂದಡಿಯಿಡುವ ಮೊದಲು ಅದರ ಕುರಿತು ತನ್ನ ಮೇಲಿರುವ ವಿಧಿಯೇನೆಂದು (ಅಂದರೆ ತಾನು ಅದನ್ನು ಮಾಡುವೆನೆಂದು ವಿಧಿಸಲಾಗಿದೆಯೋ ಇಲ್ಲವೋ ಎಂದು) ಅರಿತಿರದ ವ್ಯಕ್ತಿ ಅದನ್ನು ಮಾಡಿದ ಬಳಿಕ ವಿಧಿಯನ್ನು ನೆಪವಾಗಿಟ್ಟು ತನ್ನನ್ನು ಸಮರ್ಥಿಸುವುದು ಹೇಗೆ ಸಾಧ್ಯ? ಅಲ್ಲಾಹನಂತೂ ಈ ನೆಪವನ್ನು ತಿರಸ್ಕರಿಸಿದ್ದಾನೆ.[57]

---

**57**. ಉದಾಹರಣೆಗೆ ಒಬ್ಬ ವ್ಯಕ್ತಿ ಮದ್ಯಪಾನ ಮಾಡಲು ಮುಂದಾಗುತ್ತಾನೆ ಎಂದಿಟ್ಟುಕೊಳ್ಳಿ. ತಾನು ಮದ್ಯಪಾನ ಮಾಡುವೆನೆಂದು ತನ್ನ ಮೇಲೆ ವಿಧಿಸಲಾಗಿದೆಯೋ ಅಥವಾ ಇಲ್ಲವೋ ಎಂದು ಮದ್ಯಪಾನ ಮಾಡುವ ಮೊದಲು ಅವನು ಅರಿತಿರುವುದಿಲ್ಲ. ಅವನು ತನ್ನ ಇಚ್ಛೆ ಮತ್ತು ಸ್ವಾತಂತ್ರ್ಯದಿಂದಲೇ ಮದ್ಯಪಾನ ಮಾಡುತ್ತಾನೆ. ಆದ್ದರಿಂದ ಮದ್ಯಪಾನ ಮಾಡಿದ ಬಳಿಕ ತಾನು ಮದ್ಯಪಾನ ಮಾಡಿರುವುದು ಅಲ್ಲಾಹು ಅದನ್ನು ನನ್ನ ಮೇಲೆ ವಿಧಿಸಿರುವ ಕಾರಣದಿಂದಾಗಿದೆ ಎಂದು ಹೇಳುವುದರಲ್ಲಿ ಅರ್ಥವಿಲ್ಲ.

﴿ سَيَقُولُ ٱلَّذِينَ أَشْرَكُوا۟ لَوْ شَآءَ ٱللَّهُ مَآ أَشْرَكْنَا وَلَآ ءَابَآؤُنَا وَلَا حَرَّمْنَا مِن شَىْءٍ ۚ كَذَٰلِكَ كَذَّبَ ٱلَّذِينَ مِن قَبْلِهِمْ حَتَّىٰ ذَاقُوا۟ بَأْسَنَا ۗ قُلْ هَلْ عِندَكُم مِّنْ عِلْمٍ فَتُخْرِجُوهُ لَنَآ ۖ إِن تَتَّبِعُونَ إِلَّا ٱلظَّنَّ وَإِنْ أَنتُمْ إِلَّا تَخْرُصُونَ ﴿١٤٨﴾ ﴾

**“ಬಹುದೇವವಿಶ್ವಾಸಿಗಳು ಹೇಳುವರು: ಅಲ್ಲಾಹು ಇಚ್ಛಿಸುತ್ತಿದ್ದರೆ ನಾವಾಗಲಿ ನಮ್ಮ ಪೂರ್ವಿಕರಾಗಲಿ ಬಹುದೇವವಿಶ್ವಾಸ ಕೈಗೊಳ್ಳುತ್ತಿರಲಿಲ್ಲ ಮತ್ತು ಯಾವ ವಸ್ತುವನ್ನೂ ನಿಷಿದ್ಧಗೊಳಿಸುತ್ತಿರಲಿಲ್ಲ. ನಮ್ಮ ಶಿಕ್ಷೆಯನ್ನು ಸವಿಯುವವರೆಗೆ ಅವರ ಪೂರ್ವಿಕರು ಕೂಡ ಅದೇ ರೀತಿ ಸುಳ್ಳು ಹೇಳಿದ್ದರು. (ಓ ಪ್ರವಾದಿ!) ಹೇಳು: ಈ ಬಗ್ಗೆ ನಿಮ್ಮಲ್ಲಿ ಏನಾದರೂ ಪುರಾವೆಯಿದೆಯೇ? ಹಾಗಿದ್ದರೆ ಅದನ್ನು ನಮ್ಮೆಡೆಗೆ ಹೊರತನ್ನಿರಿ! ನೀವು ಕೇವಲ ಊಹೆಯನ್ನು ಮಾತ್ರ ಅನುಸರಿಸುತ್ತಿರುವಿರಿ. ನೀವು ಕೇವಲ ಸುಳ್ಳನ್ನು ಮಾತ್ರ ಹೇಳುತ್ತಿರುವಿರಿ.”** (ಕುರ್‌ಆನ್ 6/148)

**ವಿಧಿಯನ್ನು ನೆಪವಾಗಿಡುವ ಪಾಪಿಯೊಂದಿಗೆ ನಾವು ಹೀಗೆನ್ನುತ್ತೇವೆ:**

ಪೂರ್ವವಿಧಿಯಾಗಿ ಅಲ್ಲಾಹು ನಿನ್ನ ಮೇಲೆ ವಿಧೇಯತೆಯನ್ನು ವಿಧಿಸಿದ್ದಾನೆ ಎಂದು ಭಾವಿಸಿಕೊಂಡು ನೀನೇಕೆ ಅಲ್ಲಾಹನಿಗೆ ವಿಧೇಯತೆ ತೋರುವತ್ತ ಧಾವಿಸುವುದಿಲ್ಲ? ಯಾಕೆಂದರೆ ನಿನ್ನಿಂದ ಒಂದು ಕರ್ಮವು ಹೊರಬರುವುದಕ್ಕೆ ಮುಂಚೆ ಅದರಲ್ಲಿರುವ ಅಲ್ಲಾಹನ ವಿಧಿಯು ವಿಧೇಯತೆಯಾಗಿದೆಯೋ ಅಥವಾ ಧಿಕ್ಕಾರವಾಗಿದೆಯೋ ಎಂದು ನೀನು ಅರಿತಿರುವುದಿಲ್ಲ. ಆದ್ದರಿಂದಲೇ ಪ್ರವಾದಿ(ﷺ)ರವರು ತಮ್ಮ ಸಹಾಬಾಗಳೊಡನೆ ‘ನಿಮ್ಮ ಪೈಕಿ ಪ್ರತಿಯೊಬ್ಬರ ಆಸನವನ್ನೂ ಸ್ವರ್ಗದಲ್ಲಿ ಅಥವಾ ನರಕದಲ್ಲಿ ಈಗಾಗಲೇ ವಿಧಿಸಲಾಗಿದೆ’ ಎಂದು ಹೇಳಿದಾಗ ಅವರು ಕೇಳಿದರು: ‘ಹಾಗಾದರೆ ನಾವು ಅದರ ಮೇಲೆ ಅವಲಂಬಿತರಾಗಿ ಕರ್ಮವೆಸಗುವುದನ್ನು ವರ್ಜಿಸಲೇ?’ ಆಗ ಪ್ರವಾದಿ(ﷺ) ರವರು ಹೇಳಿದರು: ‘ಕೂಡದು, ನೀವು ಕರ್ಮವೆಸಗಬೇಕು. ಯಾಕೆಂದರೆ ಪ್ರತಿಯೊಬ್ಬ ವ್ಯಕ್ತಿಗೂ ಅವನು ಯಾವುದಕ್ಕಾಗಿ ಸೃಷ್ಟಿಸಲಾಗಿರುವನೋ ಅದನ್ನು ಅವನಿಗೆ ಸುಲಭೀಕರಿಸಲಾಗುವುದು.’[58]

**ವಿಧಿಯನ್ನು ನೆಪವಾಗಿಡುವ ಪಾಪಿಯೊಂದಿಗೆ ನಾವು ಹೀಗೆನ್ನುತ್ತೇವೆ:**

ನೀನು ಮಕ್ಕಾದೆಡೆಗೆ ಯಾತ್ರೆ ಹೊರಡಲು ಅನುವಾಗಿದ್ದು, ಅಲ್ಲಿಗೆ ತಲುಪಲು ಎರಡು ದಾರಿಗಳಿದ್ದು, ಸತ್ಯಸಂಧನೊಬ್ಬನು ನಿನ್ನೊಂದಿಗೆ ಅವುಗಳ ಪೈಕಿ ಒಂದು ದಾರಿ ಭೀಕರವೂ, ದುರ್ಗಮವೂ ಆಗಿದೆಯೆಂದು ಮತ್ತು ಎರಡನೆಯ ದಾರಿ ಸುರಕ್ಷಿತವೂ, ಸರಳವೂ ಆಗಿದೆಯೆಂದು ಹೇಳಿದರೆ ಖಂಡಿತವಾಗಿಯೂ ನೀನು ಎರಡನೆ ದಾರಿಯನ್ನು ಪ್ರವೇಶಿಸುವೆ. ಇದು ನನ್ನ ಮೇಲೆ ಪೂರ್ವವಿಧಿಯಾಗಿ ವಿಧಿಸಲಾಗಿದೆ ಎಂದೆನ್ನುತ್ತಾ ನೀನು ಮೊದಲನೆಯ ದಾರಿಯನ್ನು ಪ್ರವೇಶಿಸುವುದಿಲ್ಲ. ನೀನೇನಾದರೂ ಹಾಗೆ ಮಾಡಿದರೆ ಜನರು ನಿನ್ನನ್ನು ಹುಚ್ಚರ ಪೈಕಿ ಒಬ್ಬನೆಂದು ಗಣಿಸುವರು.

---

**58**. ನೋಡಿ: ‘ಸಹೀಹ್ ಮುಸ್ಲಿಮ್’ (4/2039; ಹದೀಸ್ ನಂ. 2647).

**ನಾವು ಅವನೊಂದಿಗೆ ಮತ್ತೂ ಹೇಳುತ್ತೇವೆ:** ನಿನ್ನ ಮುಂದೆ ಎರಡು (ಸಮಾನ) ಉದ್ಯೋಗಗಳನ್ನು ತೋರಿಸಲಾಗಿ ಅವುಗಳ ಪೈಕಿ ಒಂದು ಅಧಿಕ ಸಂಬಳ ದೊರೆಯುವುದಾಗಿದ್ದರೆ ಖಂಡಿತವಾಗಿಯೂ ನೀನು ಹೆಚ್ಚು ಸಂಬಳದ ಉದ್ಯೋಗವನ್ನೇ ಆರಿಸುವೆ. ಹಾಗಾದರೆ ವಿಧಿಯನ್ನು ನೆಪವಾಗಿಟ್ಟು ಪರಲೋಕದಲ್ಲಿ ನೀಚ ಪ್ರತಿಫಲ ದೊರೆಯುವ ಕರ್ಮವನ್ನೇಕೆ ನೀನು ಆರಿಸುವೆ?

**ನಾವು ಅವನಿಗೆ ಮತ್ತೂ ಹೇಳುತ್ತೇವೆ:** ನಿನಗೆ ಶಾರೀರಿಕ ರೋಗವುಂಟಾದರೆ ಚಿಕಿತ್ಸೆಗಾಗಿ ಎಲ್ಲ ವೈದ್ಯರ ಬಾಗಿಲುಗಳನ್ನು ನೀನು ತಟ್ಟುವೆ. ತರುವಾಯ ಶಸ್ತ್ರಕ್ರಿಯೆಯಿಂದ ಅಥವಾ ಔಷಧಿಯ ಕಹಿಯಿಂದ ಅನುಭವವಾಗುವ ಎಲ್ಲ ನೋವನ್ನೂ ನೀನು ಸಹಿಸುವೆ. ಹಾಗಾದರೆ ಧಿಕ್ಕಾರದಿಂದ ಉದ್ಭವಿಸುವ ನಿನ್ನ ಹೃದಯದ ರೋಗಕ್ಕೆ ನೀನೇಕೆ ಇದೇ ರೀತಿ ಮಾಡುವುದಿಲ್ಲ?

ಅಲ್ಲಾಹನ ಕರುಣೆಯ ಮತ್ತು ಯುಕ್ತಿಯ ಸಮಗ್ರತೆಯಿಂದಾಗಿ ಕೆಡುಕನ್ನು ಅವನಿಗೆ ಸೇರಿಸಿ ಹೇಳಲಾಗುವುದಿಲ್ಲವೆಂದು ನಾವು ವಿಶ್ವಾಸವಿಡುತ್ತೇವೆ. ಪ್ರವಾದಿ(ﷺ)ರವರು ಹೇಳಿದರು:

«وَالشَّرُّ لَيْسَ إِلَيْكَ»

**"ಕೆಡುಕನ್ನು ನಿನಗೆ (ಅಲ್ಲಾಹನಿಗೆ) ಸೇರಿಸಿ ಹೇಳಲಾಗುವುದಿಲ್ಲ."**(59)

ಇದನ್ನು ಮುಸ್ಲಿಮ್ ವರದಿ ಮಾಡಿದ್ದಾರೆ. ಆದ್ದರಿಂದ ಅಲ್ಲಾಹನ ವಿಧಿಯಲ್ಲಿ ಕೆಡುಕೆಂಬುದು ಎಂದೆಂದಿಗೂ ಇರುವುದಿಲ್ಲ. ಯಾಕೆಂದರೆ ಅದು ಅವನ ಕರುಣೆ ಮತ್ತು ಯುಕ್ತಿಯಿಂದ ಹೊರಬರುವುದಾಗಿದೆ.

ಆದರೆ ಕೆಡುಕು ಇರುವುದು ಅವನು ಯಾವುದರ ಮೇಲೆ ವಿಧಿಯನ್ನು ಜಾರಿಗೊಳಿಸುತ್ತಾನೋ ಅದರಲ್ಲಾಗಿದೆ. ಯಾಕೆಂದರೆ ಹಸನ್(رضي الله عنه)ರಿಗೆ ಕಲಿಸಿಕೊಟ್ಟ ಕುನೂತ್‌ನ ಪ್ರಾರ್ಥನೆಯಲ್ಲಿ ಪ್ರವಾದಿ(ﷺ)ರವರು ಹೇಳಿದರು:

«وَقِنِي شَرَّ مَا قَضَيْتَ»

**"ನೀನು ಯಾವುದರಲ್ಲಿ ವಿಧಿ ಜಾರಿಗೊಳಿಸಿರುವೆಯೋ ಅದರ ಕೆಡುಕಿನಿಂದ ನನ್ನನ್ನು ಪಾರುಮಾಡು."**(60)

ಅವನು ಯಾವುದರಲ್ಲಿ ವಿಧಿ ಜಾರಿಗೊಳಿಸಿದ್ದಾನೋ ಅದರೊಂದಿಗೆ ಕೆಡುಕನ್ನು ಸೇರಿಸಿ ಹೇಳಲಾಗಿದೆ. ಮಾತ್ರವಲ್ಲದೆ ಯಾವುದರಲ್ಲಿ ವಿಧಿ ಜಾರಿಯಾಗುತ್ತದೋ ಅದರಲ್ಲಿರುವ ಕೆಡುಕು ಶುದ್ಧ ರೂಪದಲ್ಲಿರುವ ಕೆಡುಕಲ್ಲ. ಬದಲಾಗಿ ಒಂದು ದೃಷ್ಟಿಯಲ್ಲಿ ಅದು ಆ ಸ್ಥಳದಲ್ಲಿ ಕೆಡುಕಾಗಿದ್ದರೆ ಇನ್ನೊಂದು ದೃಷ್ಟಿಯಲ್ಲಿ ಒಳಿತಾಗಿರುತ್ತದೆ. ಒಂದು

**59**. ನೋಡಿ: 'ಸಹೀಹ್ ಮುಸ್ಲಿಮ್' (1/534; ಹದೀಸ್ ನಂ. 771).

**60**. ನೋಡಿ: 'ಸುನನ್ ಅಬೀದಾವೂದ್' (1/452; ಹದೀಸ್ ನಂ. 1425). ಶೈಖ್ ಅಲ್ಬಾನೀ ಇದನ್ನು ಸಹೀಹ್ ಎಂದಿದ್ದಾರೆ.

ದೃಷ್ಟಿಯಲ್ಲಿ ಅದು ಆ ಸ್ಥಳದಲ್ಲಿ ಕೆಡುಕಾಗಿದ್ದರೆ ಇನ್ನೊಂದು ಸ್ಥಳದಲ್ಲಿ ಒಳಿತಾಗಿರುತ್ತದೆ.

ಕ್ಷಾಮ, ರೋಗ, ಬಡತನ ಮತ್ತು ಭಯದಿಂದಾಗಿ ಭೂಮಿಯಲ್ಲುಂಟಾಗುವ ಕ್ಷೋಭೆಗಳು ಕೆಡುಕಾಗಿದೆ. ಆದರೆ ಅದು ಇನ್ನೊಂದು ಸ್ಥಳದಲ್ಲಿ ಒಳಿತಾಗಿದೆ. ಅಲ್ಲಾಹು ಹೇಳಿದ್ದಾನೆ:

﴿ ظَهَرَ ٱلْفَسَادُ فِى ٱلْبَرِّ وَٱلْبَحْرِ بِمَا كَسَبَتْ أَيْدِى ٱلنَّاسِ لِيُذِيقَهُم بَعْضَ ٱلَّذِى عَمِلُوا۟ لَعَلَّهُمْ يَرْجِعُونَ ﴿٤١﴾ ﴾

**"ಜನರು ಕೈಗಳು ಗಳಿಸಿಕೊಂಡಿರುವ ಕಾರಣದಿಂದಾಗಿ ದಡದಲ್ಲಿ ಮತ್ತು ಕಡಲಲ್ಲಿ ಕ್ಷೋಭೆಯು ಬಹಿರಂಗಗೊಂಡಿದೆ. ಅವರು ಮಾಡಿಕೊಂಡಿರುವುದರ ಪೈಕಿ ಕೆಲವನ್ನು ಅವರು ಸವಿಯುವಂತೆ ಮಾಡುವ ಸಲುವಾಗಿ ಮತ್ತು ಅವರು (ಪಶ್ಚಾತ್ತಾಪಪಟ್ಟು) ಮರಳುವ ಸಲುವಾಗಿ."** (ಕುರ್‌ಆನ್ 30/41)

ಕಳ್ಳನ ಕೈ ಕತ್ತರಿಸುವುದು ಮತ್ತು ವ್ಯಭಿಚಾರಿಯನ್ನು ಕಲ್ಲೆಸೆದು ಸಾಯಿಸುವುದು ಕಳ್ಳನಿಗೆ ಮತ್ತು ವ್ಯಭಿಚಾರಿಗೆ ಸಂಬಂಧಿಸಿದಂತೆ ಕೆಡುಕಾಗಿದೆ. ಆದರೆ ಇನ್ನೊಂದು ದೃಷ್ಟಿಯಲ್ಲಿ ಅದು ಅವರಿಬ್ಬರಿಗೂ ಒಳಿತಾಗಿದೆ. ಯಾಕೆಂದರೆ ಅದು ಅವರಿಬ್ಬರಿಗೂ ಪ್ರಾಯಶ್ಚಿತ್ತವಾಗಿದೆ. ಒಂದೇ ಅಪರಾಧಕ್ಕಾಗಿ ಅವರಿಗೆ ಇಹಲೋಕದಲ್ಲೂ ಪರಲೋಕದಲ್ಲೂ ಜಂಟಿ ಶಿಕ್ಷೆ ದೊರೆಯುವುದಿಲ್ಲ. ಹಾಗೆಯೇ ಅದು ಇನ್ನೊಂದು ಸ್ಥಳದಲ್ಲಿ ಒಳಿತಾಗಿದೆ. ಯಾಕೆಂದರೆ ಅದರಲ್ಲಿ ಆಸ್ತಿಪಾಸ್ತಿ, ಘನತೆ ಗೌರವ ಮತ್ತು ಕುಟುಂಬ ಸಂಬಂಧಗಳ ಸಂರಕ್ಷಣೆಯಿದೆ.

# ثمـرات العقيدة

## ಅಕೀದಃ (ವಿಶ್ವಾಸ)ದ ಫಲಗಳು

ಅತ್ಯುತ್ಕೃಷ್ಟವೂ ಈ ಮಹಾನ್ ನಿಯಮಗಳನ್ನು ಒಳಗೊಂಡಿರುವುದೂ ಆಗಿರುವ ಈ ಅಕೀದಃವು ಅದರಲ್ಲಿ ವಿಶ್ವಾಸವಿಡುವವನಿಗೆ ಅನೇಕ ಉತ್ಕೃಷ್ಟ ಫಲಗಳನ್ನು ನೀಡುತ್ತದೆ.

ಅಲ್ಲಾಹನಲ್ಲಿ, ಅವನ ನಾಮಗಳಲ್ಲಿ ಮತ್ತು ಅವನ ವಿಶೇಷಣಗಳಲ್ಲಿರುವ ವಿಶ್ವಾಸವು ಮನುಷ್ಯನಿಗೆ ಅಲ್ಲಾಹನ ಆಜ್ಞೆಗಳನ್ನು ಪಾಲಿಸಲು ಮತ್ತು ಅವನ ವಿರೋಧಗಳನ್ನು ವರ್ಜಿಸಲು ಅನಿವಾರ್ಯವಾಗಿ ಬೇಕಾಗಿರುವ ಅಲ್ಲಾಹನ ಪ್ರೀತಿ ಮತ್ತು ಗೌರವವನ್ನು ತಂದುಕೊಡುತ್ತದೆ. ಅಲ್ಲಾಹನ ಆಜ್ಞೆಗಳ ಪಾಲನೆ ಮತ್ತು ಅವನ ವಿರೋಧಗಳ ವರ್ಜಿಸುವಿಕೆಯಿಂದ ವ್ಯಕ್ತಿ ಮತ್ತು ಸಮಾಜಕ್ಕೆ ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ಪೂರ್ಣ ಸೌಭಾಗ್ಯವು ದೊರೆಯುತ್ತದೆ.

﴿ مَنْ عَمِلَ صَٰلِحًا مِّن ذَكَرٍ أَوْ أُنثَىٰ وَهُوَ مُؤْمِنٌ فَلَنُحْيِيَنَّهُۥ حَيَوٰةً طَيِّبَةً ۖ
وَلَنَجْزِيَنَّهُمْ أَجْرَهُم بِأَحْسَنِ مَا كَانُوا۟ يَعْمَلُونَ ﴿٩٧﴾ ﴾

**“ಗಂಡು ಅಥವಾ ಹೆಣ್ಣಿನ ಪೈಕಿ ಯಾರು ವಿಶ್ವಾಸಿಯಾಗಿದ್ದುಕೊಂಡು ಸತ್ಕರ್ಮಗೈಯ್ಯುತ್ತಾನೋ ನಾವು ಅವನಿಗೆ ಉತ್ತಮವಾದ ಬದುಕನ್ನು ಕರುಣಿಸುವೆವು ಮತ್ತು ಅವರು ಮಾಡಿಕೊಂಡಿರುವ ಅತ್ಯುತ್ತಮವಾದ ಕರ್ಮಗಳಿಗೆ ನಾವು ಅವರಿಗೆ ಪ್ರತಿಫಲವನ್ನು ದಯಪಾಲಿಸುವೆವು.”** (ಕುರ್‌ಆನ್ 16/97)

**ಮಲಕ್‌ಗಳ ಮೇಲಿರುವ ವಿಶ್ವಾಸದ ಫಲಗಳು:**

**ಒಂದು:** ಅವರನ್ನು ಸೃಷ್ಟಿಸಿದ ಸೃಷ್ಟಿಕರ್ತನ ಔನ್ನತ್ಯ, ಸಾಮರ್ಥ್ಯ ಮತ್ತು ಅಧಿಕಾರದ ಕುರಿತು ಜ್ಞಾನ ದೊರೆಯುತ್ತದೆ.

**ಎರಡು:** ಮನುಷ್ಯರನ್ನು ಸಂರಕ್ಷಿಸಲು, ಅವರ ಕರ್ಮಗಳನ್ನು ದಾಖಲಿಸಲು ಹಾಗೂ ಇನ್ನಿತರ ಮನುಷ್ಯ ಹಿತದಲ್ಲಿ ಸೇರಿದ ಕೆಲಸಗಳನ್ನು ಮಾಡಲು ಮಲಕ್‌ಗಳ ಪೈಕಿ ಕೆಲವರನ್ನು ನೇಮಿಸುವ ಮೂಲಕ ಅಲ್ಲಾಹು ಮನುಷ್ಯರೊಂದಿಗೆ ಹೊಂದಿರುವ ತೀವ್ರ ಕಾಳಜಿಗಾಗಿ ಅವನಿಗೆ ಕೃತಜ್ಞತೆ ಸಲ್ಲಿಸಲು ಕಾರಣವಾಗುತ್ತದೆ.

**ಮೂರು:** ಸಮಗ್ರ ರೂಪದಲ್ಲಿ ಅಲ್ಲಾಹನ ಆರಾಧನೆ ಮಾಡುತ್ತಿರುವ ಮತ್ತು ವಿಶ್ವಾಸಿಗಳಿಗಾಗಿ ಪಾಪಮುಕ್ತಿ ಬೇಡುವ ಕಾರಣದಿಂದ ಮಲಕ್‌ಗಳನ್ನು ಪ್ರೀತಿಸಲು ಕಾರಣವಾಗುತ್ತದೆ.

**ಗ್ರಂಥಗಳ ಮೇಲಿರುವ ವಿಶ್ವಾಸದ ಫಲಗಳು:**

**ಒಂದು:** ಪ್ರತಿಯೊಂದು ಜನತೆಗೂ ಅವರನ್ನು ಸನ್ಮಾರ್ಗದೆಡೆಗೆ ಮುನ್ನಡೆಸುವುದಕ್ಕಾಗಿ ಒಂದೊಂದು ಗ್ರಂಥವನ್ನು ಇಳಿಸಿಕೊಡುವ ಮೂಲಕ ಅಲ್ಲಾಹು ತನ್ನ ಸೃಷ್ಟಿಗಳ ಮೇಲೆ ಹೊಂದಿರುವ ಕರುಣೆ ಮತ್ತು ಕಾಳಜಿಯ ಅರಿವು ದೊರೆಯುತ್ತದೆ.

**ಎರಡು:** ಈ ಗ್ರಂಥಗಳಲ್ಲಿ ಪ್ರತಿಯೊಂದು ಸಮುದಾಯಕ್ಕೂ ಅದಕ್ಕೆ ಹೊಂದಾಣಿಕೆಯಾಗುವುದನ್ನು ಮಾತ್ರ ಶರೀಅತ್ ಆಗಿ ಮಾಡಿಕೊಟ್ಟ ಅಲ್ಲಾಹನ ಚಾಣಾಕ್ಷತೆಯ ದರ್ಶನವಾಗುತ್ತದೆ. ಈ ಗ್ರಂಥಗಳ ಪೈಕಿ ಕೊನೆಯ ಗ್ರಂಥವಾಗಿದೆ ಮಹೋನ್ನತವಾದ ಕುರ್‌ಆನ್. ಇದು ಅಂತ್ಯದಿನದವರೆಗೆ ಎಲ್ಲ ಸೃಷ್ಟಿಗಳಿಗೂ ಸ್ಥಳ ಮತ್ತು ಕಾಲ ವ್ಯತ್ಯಾಸವಿಲ್ಲದೆ ಹೊಂದಾಣಿಕೆಯಾಗುತ್ತದೆ.

**ಮೂರು:** ಇದಕ್ಕಾಗಿ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಲು ಅದು ಕಾರಣವಾಗುತ್ತದೆ.

**ಪ್ರವಾದಿಗಳ ಮೇಲಿರುವ ವಿಶ್ವಾಸದ ಫಲಗಳು:**

**ಒಂದು:** ಸನ್ಮಾರ್ಗದರ್ಶನ ಮತ್ತು ಮಾರ್ಗನಿರ್ದೇಶನ ನೀಡುವುದಕ್ಕಾಗಿ ಅಲ್ಲಾಹು ಸಂದೇಶವಾಹಕರನ್ನು ನಿಯೋಗಿಸುವ ಮೂಲಕ ತನ್ನ ಸೃಷ್ಟಿಗಳ ಮೇಲೆ ಹೊಂದಿರುವ ಕರುಣೆ ಮತ್ತು ಕಾಳಜಿಯ ಅರಿವು ದೊರೆಯುತ್ತದೆ.

**ಎರಡು:** ಈ ಮಹಾ ಅನುಗ್ರಹಕ್ಕಾಗಿ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಲು ಇದು ಕಾರಣವಾಗುತ್ತದೆ.

**ಮೂರು:** ಪ್ರವಾದಿಗಳನ್ನು ಪ್ರೀತಿಸಲು, ಅವರನ್ನು ಗೌರವಿಸಲು ಮತ್ತು ಅವರಿಗೆ ಹೊಂದಿಕೆಯಾಗುವ ರೀತಿಯಲ್ಲಿ ಅವರನ್ನು ಪ್ರಶಂಸಿಸಲು ಇದು ಕಾರಣವಾಗುತ್ತದೆ. ಯಾಕೆಂದರೆ ಅವರು ಅಲ್ಲಾಹನ ಸಂದೇಶವಾಹಕರೂ ಸೃಷ್ಟಿಗಳ ಪೈಕಿ ಪರಿಶುದ್ಧರೂ ಆಗಿದ್ದಾರೆ. ಅಲ್ಲಾಹನ ಆರಾಧನೆಯಲ್ಲಿ, ಅವನ ಸಂದೇಶವನ್ನು ತಲುಪಿಸುವುದರಲ್ಲಿ, ಅವನ ಸೃಷ್ಟಿಗಳ ಹಿತ ಬಯಸುವುದರಲ್ಲಿ ಮತ್ತು ಅವರ (ಸೃಷ್ಟಿಗಳ) ದೌರ್ಜನ್ಯವನ್ನು ಸಹಿಸುವುದರಲ್ಲಿ ಅವರು ಅಚಲವಾಗಿ ನಿಂತವರಾಗಿದ್ದರು.

**ಅಂತ್ಯದಿನದ ಮೇಲಿರುವ ವಿಶ್ವಾಸದ ಫಲಗಳು:**

**ಒಂದು:** ಆ ದಿನದಲ್ಲಿ ದೊರೆಯುವ ಪ್ರತಿಫಲವನ್ನು ಹಂಬಲಿಸಿ ಅಲ್ಲಾಹನಿಗೆ ಹೆಚ್ಚು ಹೆಚ್ಚಾಗಿ ವಿಧೇಯತೆ ತೋರಿಸಲು ಮತ್ತು ಆ ದಿನದಲ್ಲಿ ದೊರೆಯುವ ಶಿಕ್ಷೆಯನ್ನು ಭಯಪಟ್ಟು ಅಲ್ಲಾಹನನ್ನು ಧಿಕ್ಕರಿಸುವುದನ್ನು ಹೆಚ್ಚು ಹೆಚ್ಚಾಗಿ ವರ್ಜಿಸಲು ಇದು ಪ್ರೇರಣೆಯನ್ನು ನೀಡುತ್ತದೆ.

**ಎರಡು:** ಪರಲೋಕದಲ್ಲಿ ದೊರೆಯುವ ಅನುಗ್ರಹಗಳನ್ನು ಮತ್ತು ಪ್ರತಿಫಲಗಳನ್ನು ಆಶಿಸುವ ಮೂಲಕ ತಾನು ಕಳೆದುಕೊಳ್ಳುವ ಐಹಿಕ ಅನುಗ್ರಹಗಳು ಮತ್ತು ಸುಖಸೌಕರ್ಯಗಳ ವಿಷಯದಲ್ಲಿ ವಿಶ್ವಾಸಿಯ ಮನಸ್ಸಿಗೆ ನೆಮ್ಮದಿ ದೊರೆಯುತ್ತದೆ.

**ವಿಧಿಯ ಮೇಲಿರುವ ವಿಶ್ವಾಸದ ಫಲಗಳು:**

**ಒಂದು:** ಯಾವುದೇ ಕರ್ಮವನ್ನು ಮಾಡುವಾಗ ಅಲ್ಲಾಹನ ಮೇಲೆ ಅವಲಂಬಿತನಾಗಿರುವುದು. ಯಾಕೆಂದರೆ ಕಾರಣ ಮತ್ತು ಪರಿಣಾಮಗಳೆರಡೂ ಅಲ್ಲಾಹನ ತೀರ್ಮಾನ ಮತ್ತು ವಿಧಿಗೆ ಅನುಗುಣವಾಗಿರುತ್ತದೆ.

**ಎರಡು:** ಮನಃಶಾಂತಿ ಮತ್ತು ಹೃದಯ ಸಾಂತ್ವನ ದೊರೆಯುತ್ತದೆ. ಯಾಕೆಂದರೆ ಒಂದು ಸಂಭವದ ಕುರಿತು, ಅದರಲ್ಲಿ ಅಲ್ಲಾಹನ ವಿಧಿ ಜಾರಿಗೊಂಡಿರುವುದರಿಂದ ಅದು ಸಂಭವಿಸಿದೆ, ತಾನದನ್ನು ಎಷ್ಟೇ ಅಸಹ್ಯಪಟ್ಟರೂ ಅದು ಸಂಭವಿಸಿಯೇ ತೀರುತ್ತದೆ ಎಂದು ಅರಿತಾಗ ಮನಸ್ಸು ಶಾಂತವಾಗುತ್ತದೆ ಮತ್ತು ಹೃದಯಕ್ಕೆ ಸಾಂತ್ವನ ದೊರೆಯುತ್ತದೆ. ಇದರಿಂದಾಗಿ ಅವನು ಅಲ್ಲಾಹನ ವಿಧಿಯ ಕುರಿತು ತೃಪ್ತನಾಗುತ್ತಾನೆ. ಆದ್ದರಿಂದ ವಿಧಿಯಲ್ಲಿ ವಿಶ್ವಾಸವಿಡುವ ವ್ಯಕ್ತಿಗಿಂತ ಹೆಚ್ಚು ಸಂತಸದೊಂದಿಗೆ ಬದುಕುವ, ಹೆಚ್ಚು ಶಾಂತವಾದ ಮನಸ್ಸನ್ನು ಹೊಂದಿರುವ ಮತ್ತು ಹೆಚ್ಚು ಸಾಂತ್ವನವನ್ನು ಹೊಂದಿರುವ ಬೇರೊಬ್ಬ ವ್ಯಕ್ತಿಯಿರಲಾರನು.

**ಮೂರು:** ಉದ್ದೇಶವು ಈಡೇರುವಾಗ ಉಂಟಾಗುವ ಆತ್ಮಾಭಿಮಾನವನ್ನು ಇದು ನಿವಾರಿಸುತ್ತದೆ. ಯಾಕೆಂದರೆ ಉದ್ದೇಶದ ಈಡೇರಿಕೆಯು ಅಲ್ಲಾಹನ ಅನುಗ್ರಹವಾಗಿದೆ. ಒಳಿತು ಮತ್ತು ಯಶಸ್ಸುಗಳ ಕಾರಣಗಳ ಮೂಲಕ ಅವನು ಅದನ್ನು ವಿಧಿಸಿದ್ದಾನೆ. ಆದ್ದರಿಂದ ಅವನು (ಉದ್ದೇಶ ಈಡೇರಿದ ವ್ಯಕ್ತಿ) ಆ ಸಂದರ್ಭದಲ್ಲಿ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸುತ್ತಾನೆ ಮತ್ತು ಆತ್ಮಾಭಿಮಾನವನ್ನು ವರ್ಜಿಸುತ್ತಾನೆ.

**ನಾಲ್ಕನೆಯದಾಗಿ:** ಉದ್ದೇಶವು ಈಡೇರದಿರುವಾಗ ಅಥವಾ ಅನಿಷ್ಟವು ಸಂಭವಿಸಿದಾಗ ಉಂಟಾಗುವ ಆತ್ಮಕ್ಲೇಶ ಮತ್ತು ಅತೃಪ್ತಿಯನ್ನು ಇದು ದೂರೀಕರಿಸುತ್ತದೆ. ಯಾಕೆಂದರೆ ಅದು ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಯಾರಿಗೆ ಸೇರಿದ್ದಾಗಿದೆಯೋ ಆ ಅಲ್ಲಾಹನ ವಿಧಿ ಜಾರಿಗೊಂಡಿರುವುದರಿಂದಾಗಿ ಸಂಭವಿಸಿದೆ. ಅದು ಸಂಭವಿಸಿಯೇ ತೀರುತ್ತದೆ. ಅದನ್ನು ಅಸಂಭವ್ಯವಾಗಿಸಲು ಸಾಧ್ಯವಿಲ್ಲ. ಆದ್ದರಿಂದ ಅವನು (ಉದ್ದೇಶ ಈಡೇರದ ವ್ಯಕ್ತಿ) ಆ ಸಂದರ್ಭದಲ್ಲಿ ಸಹನೆ ವಹಿಸುತ್ತಾನೆ ಮತ್ತು ಪ್ರತಿಫಲವನ್ನು ಆಶಿಸುತ್ತಾನೆ.

ಅಲ್ಲಾಹು ಈ ವಚನದ ಮೂಲಕ ಅದರೆಡೆಗೆ ಸೂಚನೆ ನೀಡುತ್ತಾನೆ:

﴿ مَآ أَصَابَ مِن مُّصِيبَةٍ فِى ٱلْأَرْضِ وَلَا فِىٓ أَنفُسِكُمْ إِلَّا فِى كِتَـٰبٍ مِّن قَبْلِ أَن نَّبْرَأَهَآ ۚ إِنَّ ذَٰلِكَ عَلَى ٱللَّهِ يَسِيرٌ ﴿٢٢﴾ لِّكَيْلَا تَأْسَوْا۟ عَلَىٰ مَا فَاتَكُمْ وَلَا تَفْرَحُوا۟ بِمَآ ءَاتَىٰكُمْ ۗ وَٱللَّهُ لَا يُحِبُّ كُلَّ مُخْتَالٍ فَخُورٍ ﴿٢٣﴾ ﴾

**“ಭೂಮಿಯಲ್ಲಾಗಲಿ ನಿಮ್ಮ ಶರೀರಗಳಲ್ಲಾಗಲಿ ಯಾವ ಆಪತ್ತೂ ಎರಗುವುದಿಲ್ಲ; ನಾವದನ್ನು ಅಸ್ತಿತ್ವಕ್ಕೆ ತರುವುದಕ್ಕೆ ಮುಂಚೆಯೇ ಒಂದು ಗ್ರಂಥದಲ್ಲಿ ಅದನ್ನು ದಾಖಲಿಸಿಟ್ಟಿರದ ಹೊರತು. ಅದು ಅಲ್ಲಾಹನ ಪಾಲಿಗೆ ಅತಿ ಸುಲಭವಾಗಿದೆ. ನೀವು ಏನನ್ನು**

**ಕಳೆದುಕೊಂಡಿರುವಿರೋ ಅದಕ್ಕಾಗಿ ನೀವು ದುಃಖಿಸದಿರುವ ಸಲುವಾಗಿ ಮತ್ತು ಅವನು ನಿಮಗೆ ಏನನ್ನು ದಯಪಾಲಿಸಿರುವನೋ ಅದರಲ್ಲಿ ನೀವು ಸಂಭ್ರಮಿಸದಿರುವ ಸಲುವಾಗಿ. ಆತ್ಮಾಭಿಮಾನ ತೋರುವ ಮತ್ತು ಅಹಂಭಾವ ಪ್ರಕಟಿಸುವ ಯಾವ ವ್ಯಕ್ತಿಯನ್ನೂ ಅಲ್ಲಾಹು ಇಷ್ಟಪಡುವುದಿಲ್ಲ."** (ಕುರ್‌ಆನ್ 57/22–23)

ಅಲ್ಲಾಹು ನಮ್ಮನ್ನು ಈ ಅಕೀದಃ (ವಿಶ್ವಾಸ)ದ ಮೇಲೆ ದೃಢವಾಗಿ ನಿಲ್ಲಿಸಲು, ಅದರ ಫಲಗಳನ್ನು ನಮಗೆ ನೈಜೀಕರಿಸಿಕೊಡಲು, ಅವನ ವತಿಯಿಂದ ನಮಗೆ ಅಧಿಕವಾಗಿ ದಯಪಾಲಿಸಲು, ನಮ್ಮನ್ನು ಸನ್ಮಾರ್ಗದೆಡೆಗೆ ಮುನ್ನಡೆಸಿದ ಬಳಿಕ ನಮ್ಮ ಹೃದಯಗಳನ್ನು ವಕ್ರಗೊಳಿಸದಿರಲು ಮತ್ತು ತನ್ನ ಕರುಣೆಯನ್ನು ನಮಗೆ ಉದಾರವಾಗಿ ನೀಡಲು ನಾವು ಅವನೊಂದಿಗೆ ಪ್ರಾರ್ಥಿಸುತ್ತಿದ್ದೇವೆ. ಖಂಡಿತವಾಗಿಯೂ ಅವನು ಉದಾರವಾಗಿ ನೀಡುವವನಾಗಿದ್ದಾನೆ. ಸರ್ವಲೋಕಗಳ ಪ್ರಭುವಾದ ಅಲ್ಲಾಹನಿಗೆ ಸ್ತುತಿ.

وَصَلَّى اللَّهُ وَسَلَّمَ عَلَى نَبِيِّنَا مُحَمَّدٍ وَعَلَى آلِهِ وَأَصْحَابِهِ وَالتَّابِعِينَ لَهُمْ بِإِحْسَانٍ

ಸಮಾಪ್ತಿ: 30–10–1404 ಹಿಜರಿ.

ಕನ್ನಡ ಭಾಷೆಯಲ್ಲಿ ಕುರ್‌ಆನ್ ಮತ್ತು ಸುನ್ನತ್ ಆಧಾರಿತ ಪುಸ್ತಕಗಳು, ಕನ್ನಡ, ಬ್ಯಾರಿ, ಮಲಯಾಳಂ, ಉರ್ದು, ಇಂಗ್ಲೀಷ್ ಭಾಷೆಯಲ್ಲಿ ಪ್ರಖ್ಯಾತ ವಿದ್ವಾಂಸರ ಮತ್ತು ದಾಈಗಳ ಸಿಡಿ\ಡಿವಿಡಿಗಳಿಗೆ ಸಂಪರ್ಕಿಸಿರಿ:

# ಕರ್ನಾಟಕ ಸಲಫೀ ಅಸೋಸಿಯೇಶನ್

| | |
|---|---|
| ದಮ್ಮಾಮ್ | : 966–546584741 |
| ಅಲ್–ಕೋಬರ್ | : 966–567388901 |
| ಅಲ್–ಜುಬೈಲ್ | : 966–558234095 |
| ರಿಯಾದ್ | : 966–561626953 |
| ಜೆದ್ದಾ | : 966–503681457 |
| ಕುವೈತ್ | : 975–97921968 |

ಕತರ್ ಕನ್ನಡ ಇಸ್ಲಾಮಿಕ್ ಸೆಂಟರ್, ಕತರ್

**974–33989045**

ಇಂಡಿಯನ್ ಇಸ್ಲಾಹೀ ಸೆಂಟರ್ ಕರ್ನಾಟಕ, ದುಬೈ

**971–508600859**

ಕುರ್‌ಆನ್ ಮತ್ತು ಸುನ್ನತ್ ಆಧಾರಿತ ಇಸ್ಲಾಮೀ ಸಾಹಿತ್ಯ ಪುಸ್ತಕಗಳಿಗೆ
ಮತ್ತು ಸಿಡಿ/ಡಿವಿಡಿಗಳಿಗೆ

# Manhaj-Al-Ambiya

*Call & Guidance Centre*
Mangalore

*ಇದರ ಈ ಕೆಳಗಿನ ಶಾಖೆಗಳಿಗೆ ಭೇಟಿ ನೀಡಿರಿ:*

## Islamic Studies Centre

Markaz Ibn Taymiyya,
University Road, Deralakatte,
Mangalore
Email : *sksmlibrary@gmail.com*

## CD/DVD & Book Store

Near Ibrahim Khaleel Masjid
Nellikai Road, Mangalore – 575001
Telephone: 824 426 3068
Email : *salafibookstore@gmail.com*

## International Islamic Centre

Basement, Islamic Trust Complex
Hampankatta, Mangalore – 575001
Telephone: 824 425 1606
Email : *iicmanglore@gmail.com*

# ಇಮೇಜ್ ಪಬ್ಲಿಕೇಶನ್ಸ್ ಮತ್ತು ಇಮೇಜ್ ಎಜುಕೇಶನಲ್ ಟ್ರಸ್ಟ್
## ಪುತ್ತೂರು

*ವತಿಯಿಂದ ಪ್ರಕಟಿಸಲ್ಪಟ್ಟ ಕೃತಿಗಳು*

1. ಹದೀಸ್ ಸಾಂಕೇಂತಿಕ ಶಾಸ್ತ್ರ
2. ಬುಲೂಗುಲ್ ಮರಾಮ್ ಮಿನ್ ಅದಿಲ್ಲತಿಲ್ ಅಹ್ಕಾಮ್
3. ಕುರ್‌ಆನ್ ಮತ್ತು ಇತರ ವೇದಗ್ರಂಥಗಳು
4. ಹಜ್ ಉಮ್ರಾ ಮತ್ತು ಪ್ರವಾದಿ(ﷺ)ರವರ ಮಸೀದಿ ಸಂದರ್ಶನದ ಮಾರ್ಗದರ್ಶಿ
5. ದಿಕ್ರ್‌ಗಳು – ಪ್ರವಾದಿ(ﷺ)ರವರ ವಚನಗಳಿಂದ
6. ತಮ್ಮ ಮದ್‌ಹಬ್‌ಗಳ ಕುರಿತು ಇಮಾಮ್‌ಗಳು ಏನೆನ್ನುತ್ತಾರೆ?
7. ಅಜ್ಞಾನವಾದಿಗಳು ಯಾರು? ಸಯ್ಯದ್ ಯೂಸುಫ್‌ರೇ ಉತ್ತರಿಸಿ!
8. ಎತ್ತರಿಸಲ್ಪಟ್ಟ ಗೋರಿಗಳ ಸುತ್ತಮುತ್ತ
9. ಕುತುಬಿಯತ್ ಮತ್ತು ಮೌಲಿದ್‌ಗಳು – ಕುರ್‌ಆನ್ ಮತ್ತು ಸುನ್ನತ್ತಿನ ಬೆಳಕಿನಲ್ಲಿ
10. ಹಿಸ್ನುಲ್ ಮುಸ್ಲಿಮ್ ಮಿನ್ ಅದ್ಕಾರಿಲ್ ಕಿತಾಬಿ ವಸ್ಸುನ್ನಃ
11. ದೇವ ಪರಿಕಲ್ಪನೆ ಪ್ರಮುಖ ಧರ್ಮಗಳಲ್ಲಿ
12. ಯೇಸುವಿನ ನೈಜ ಸಂದೇಶ
13. ಮೋಕ್ಷದ ಮಾರ್ಗ
14. ನಾನು ಅರಿತುಕೊಂಡ ಇಸ್ಲಾಮ್
15. ಅಲ್ಲಾಹು
16. ಕುರ್‌ಆನ್ ದೈವಿಕ ಗ್ರಂಥವೇ?

*ಪ್ರತಿಗಳಿಗಾಗಿ ಸಂಪರ್ಕಿಸಿರಿ:*

**ಇಮೇಜ್ ಪಬ್ಲಿಕೇಶನ್ಸ್**

**ಸಲಫೀ ಕಾಂಪ್ಲೆಕ್ಸ್, ಎ.ಪಿ.ಎಂ.ಸಿ. ರಸ್ತೆ, ಪುತ್ತೂರು –1**

**ಮೊಬೈಲ್: 9632 897 299**

imageputtur@hotmail.com